# ಜನತಾ ಗೀತೆಗಳು

ಸಂಗ್ರಾಹಕರು :
ಡಾ. ಬಿ. ಎಸ್. ಗದ್ದಗಿಮಠ, ಎಂ. ಎ., ಪಿಎಚ್. ಡಿ.
ಕೆರೂರ



ತೃತೀಯ ಪುಷ್ಪ

ಮೇ ೧೯೫೬

ಬೆಲೆ ೧—೮—೦

# ಹೊನ್ನಿಯ ಮದುವೆ

೧

ಪಡುವಣ ಕಡಲಿನ
ತೆಂಗಿನ ಮಡಲಿನ
ಮರೆಯಲಿ ಮೆರೆವುದು ನಾಡೊಂದು.
ಸೃಷ್ಟಿಯ ಮಾತೆಯು
ಮೀಸಲು ಸೊಬಗಿನ
ಹೊದಿಕೆಯ ಹೊದ್ದಿಹ ಬೀಡೊಂದು.

ಅರಸುಗಳಾಳದ
ಕವಿಗಳು ಹೇಳದ
ಗಮಕಿಗಳೋದದ ಕೀರ್ತಿಸದ
ಉಳುವರ ಗೆಯ್ವರ
ಬೆವರಲಿ ತೊಯ್ವರ
ತವರೂರದು ಬೆಡಗುಗಳಿರದ.

ಬಂದುದ ನುಡಿವರು;
ಕಂಡೆಡೆ ನಡೆವರು;
ಸಂಜೆಯನೆಳಲೊಂದಕೆ ಹೆದರಿ
ನೊಗಗಳ ನೇಗಿಲ,
ಹೊಲಗಳ ಸೋಗಿಲ,
ಬಿಡುವರು ಮನೆಬಾಗಿಲ ಸೇರಿ.

# ನಲ್ಮೆ

ಚಿಂದಿಯನುಟ್ಟೇ
ಹಾಳೆಯ ತೊಟ್ಟೇ
ಇದೆ ಸಿಂಗರವೆಂದೊಸೆಯುವರು.
ಹೊಸ ಬೆಡಗಿನ ಕೈ
ತಿದ್ದಿಸದಿಹ ಮೈ
ಕೆಸರೇ ಸಾಕೆಂದೊಲಿದಿಹರು.

ಓದದ ಕಲಿಯದ
ಕಾದದ ಬಲಿಯದ
ಮಂದಿಗಳಾದರೆ ಮನೆಯಿರದೆ?
ಮುಗಿಲಿನ ಮುಂದಲೆ
ಯುಪ್ಪರಿಗೆಯ ನೆಲೆ
ಮೆಚ್ಚದೆ ಗುಡಿಸಲೊಳಿಹರೊಲಿದೆ.

ಬಳಿಯೊಳೆ ಕೆರೆ, ತೊರೆ,
ಮರ ಬಳ್ಳಿಯ ಹೊರೆ,
ಜೀವದ ತುರುಗಳ ಮೇವುಗಳು.
ಅಂಗಳದಲಿ ಹು
ಲ್ಲೊಟ್ಟಿಲ ತೊಟ್ಟಿಲ
ಏರಿ ಮೆರೆವ ಕರು ಮಂದೆಗಳು.

ಕಂಪಿನ ತೊರೆಯಲಿ
ತೇಲುವ ಮುಳುಗುವ
ತಂಪಿನ ಕೆಯ್ವೊಲವಲ್ಲಲ್ಲಿ.
ತೆರೆಮರೆಯೆತ್ತುತ
ನೋಡುವ ಮುಗುದೆಯ
ತೆರದಾ ಕಳವೆ ತೆನೆಗಳಲ್ಲಿ.

## ಹೊನ್ನಿಯ ಮದುವೆ

ಕಾವಲು ನಿಂತಿಹ
ತಳವರರಂದದ
ತೆಂಗಿನ ಕೌಂಗಿನ ಸಾಲಲ್ಲಿ.
ಏಕಾಂತದೆ ಲೋ
ಕಾಂತವ ಸೇರದೆ,
ಸುಯ್ಯುವ ಗಾಳಿಯ ಮರವಲ್ಲಿ.

ಅಲ್ಲಿಯೆ ಒಂದೆಡೆ
ದೆವ್ವದ ಗುಡಿಯಿದೆ;
ಬಳಿಯೊಳೆ ಮನೆ ಯಜಮಾನನದು;
ಗ್ರಾಮದ ದೈವವ
ನುಡಿಯಿಪ ನಡೆಯಿಪ
ಗುರಿ ತೋರಿಪ ಗುರಿಕಾರನದು.

ಊರ ಹೊರಗೆ ಹರ
ಡದ ಹೆಸರಾತಗೆ;
ಬೆಳಕನು ಕಾಣದ ಒಳನೋಟ;
ಜವ್ವನದೇರೊಳು
ಗೆಲವಿನ ಗುಡಿಗಳ
ಊರಿದ ಮೆಯ್ಸಿರಿ–ಮೊಗ–ಮಾಟ.

ಹಬ್ಬವ ಹೇಳಲು
ಗಳಿಗೆಯ ತುಬ್ಬಲು
ಅವನೇ ನಾಡಿನ ಜೋಯಿಸನು.
ನ್ಯಾಯದ ರೀತಿಯ
ಪದ್ಧತಿ ನೀತಿಯ
ತಿಳಿಸಲಿರುವ ಮೇಲಾಳವನು.

# ನಲ್ಮೆ

ಬರಿಹಕೆ ಬಾರದ
ಕತೆಯೊಕ್ಕಣೆಗಳ
ನೆನಪಿನ ನಿಧಿಯಿಂದೆತ್ತುವನು.
ಕಲಹದ ಕಳಗಳ
ಹುಲುಕಿರುಕುಳಗಳ
ತುಳಿವನು ಮದ್ದಾನೆಯೊಲವನು.

ಗುಡಿಸಲೆ ಅರಮನೆ,
ಹೊಲವೇ ರಾಜ್ಯವು,
ಮಗಳೊಬ್ಬಳೆ ಆಲೋಚನೆಗೆ;
ಮುಪ್ಪಿನ ಕುರುಡಿನ
ಕತ್ತಲೆ ನಡುವಣ
ಶಾಂತಿಯ ಶಾಸನವಾ ದೊರೆಗೆ.

ನಡುಹರಿಯುವ ಕಳೆ
ದೊಬ್ಬಳೆ ಬಂದಳು
ಹೆಂಡತಿ ಜೀವಕೆ ಕೆಳೆಗೊಟ್ಟು;
ಕಳೆಗೊಟ್ಟಿರ್ದಳು
ನಡುದಾರಿಯೊಳೇ
ಮರೆಯಾಗಿರ್ದಳು ಬೀಳ್ಕೊಟ್ಟು.

"ಹೊನ್ನಿಯೆ! ನೀನೇ!
ಎನ್ನದೆ ತಂಪಿನ
ಮೋಹದ ನೆಳಲಾಗಿಹೆ ಮಗಳೇ!
ಅಚ್ಚರಿದೆಮ್ಮೆಯು
ನಲ್ಮೆಯು ಹೆಮ್ಮೆಯು
ಜೀವನ ಸಾರದ ಬಿರಿಮುಗುಳೇ!

## ಹೊನ್ನಿಯ ಮದುವೆ

ದೈವವೆ ಎಮಗೊಡ
ನಾಟವ ಕೊಟ್ಟಿತು,
ದೈವವೆ ಅಗಲಿಕೆಗೊಟ್ಟಿಹುದು.
ಅದರೊಂದಾಣತಿ
ಮೀರುವ ದಂಪತಿ
ಪಾಪದ ತೊಟ್ಟಿನ ಹೂವಹುದು.

ತೋರದ ನಾಡನು
ಸೇರ್ದಳು ಹೊನ್ನಿಯೆ!
ನಿನ್ನನು ಹೆತ್ತಾ ಸಿಂಗಾರಿ.
ನಿನ್ನಯ ಕನ್ನಡಿ
ಮೊಗದಲಿ ಕಂಡೆನು
ಆಕೆಯ ಬಿಂಬವ ನಲವೇರಿ.

ನಿನ್ನಬ್ಬೆಯು ಜತೆ
ಗಾಳಿದ ಮನೆಯನು
ಇನ್ನೊಬ್ಬಳ ಜತೆಗಾಳುವೆನೇ?
ಒಂದೇ ಹೆಣ್ಣಿನ
ಎರಕವದಲ್ಲದೆ
ಹೆರವರ ಬೆಸುಗೆಯ ಮೆಚ್ಚುವೆನೇ?

ಎದೆಯನು ಬಿಚ್ಚುವೆ
ಹೇಳುವೆ ಮಗಳೇ!
ಆಕೆಯ ನೆನಪದೊ ಬಾಳುವುದು.
ಗದ್ದೆಯ ಹೊಲಗಳ
ನಡುವಣ ನೇಗಿಲ
ಹಿಡಿದರೆ ಹಾಡಿನೊಳೊಸರುವುದು.

## ನಲ್ಮೆ

ಕಂಗಳು ಹೋದುವು
ಕಾಲ್ಗಳು ಕುಸಿದುವು
ಹೊನ್ನಿಯೆ! ನೀನೇ ಎನ್ನ ಗತಿ!
ತಾಯಿಯ ನೇಮದ
ಬೇಹಿನ ಕೆಲಸದ
ಆಳೀ ಮುಪ್ಪಿನ ಸಂಗಡಿತಿ.

ನಡುಮನೆ ಗೌಡನ
ಮುದ್ದಿನ ಕುವರನ
ಜತೆಯಲಿ ನಿನ್ನನು ಹಂದರೊಳು,
ನೀರೆರೆದಿತ್ತರೆ
ಪುಣ್ಯವ ಸವಿಯುವ
ಕಣ್ಣನಗಿಲ್ಲದುದಿದೆ ಅಳಲು.

ಬಂಗಾರದ ಪು
ತ್ತಳಿಯೇ! ನೋಯುವು
ದೆನ್ನೆದೆ—ನಿನ್ನನು ಕೊಡಲುಂಟು.
ಜೀವದ ಸೊತ್ತನು
ಪ್ರೇಮದ ಬಿತ್ತನು
ಕೊಡಬೇಕೇದೊರೆಯುಲುನಂಟು ?

ನಲ್ಗುವರನ ಕೈ
ಹಿಡಿದೊಪ್ಪುವ ಮಗ
ಳೊಬ್ಬುಳಿ ಸೊಬಗನು ನೋಡುವುದು
ಸೈಪಾದರು, ಕೈ
ಯೊಡವೆಯ ಕೊಟ್ಟರೆ
ಹೆರವರಿಗದು-ತನಗೇನಿಹುದು?

## ಹೊನ್ನಿಯ ಮದುವೆ

ಎನ್ನೀ ಒಡಲಿನ
ಗೂಡಿಂ ಜೀವವು
ಹಾರುವುದಲ್ಲವೆ? ನೀಮತ್ತೆ.
ಅವನನೆ ಕೈಹಿಡಿ—
ಹೆಂಡತಿಯಾಗಿರು—
ತಂದೆಯು ಭಾಷೆಯನೆಣಿಸುತ್ತೆ.

ಹಲವರ ಸೇರದ
ಒಬ್ಬನ ಗರತಿಯು
ಹೊಸ್ತಿಲ ಮೇಲ್ಸಿರಿ ಕುಣಿಯುವಳು.
ಹಿರಿಯರು ನಲಿವರು,
ಬಂಧುಗಳೊಲಿವರು,
ಹರಸುತಿಹವು ಕುಲದೈವಗಳು.

ಎದ್ದೇ ಬರುವುವು
ಪುಣ್ಯಗಳೆಲ್ಲವು;
ಸೆರಗನು ಹಿಡಿವುದು ಮಂಗಲವು;
ಮಕ್ಕಳ ಮರಿಗಳ
ಚೊಕ್ಕಳ ಕಳಕಳ
ಮುಪ್ಪಿನವರಿಗೂ ಬಾಳಿಪುವು."

ಎಂದೀ ಪರಿಯಲಿ
ಪ್ರೇಮದ ಸರಿಯಲಿ
ಮಾಯಿಸುವನು ತನ್ನೆಳಮಗಳ.
ಕಾಲೂರಿನ ಗಡಿ
ಬೇಲಿಯ ದಾಟದ
ಚೆನ್ನಿಗೆ ನುಡಿವನು ಪಾಟಗಳ.

# ನಲ್ಮೆ

ಸಂಜೆಯು ನೆಳಲದೊ
ಅಂಗಳಕಿಳಿವುದು;
ಮನೆಯಲಿ ಹಣತಿಗೆ ಸೊಡರಿಹುದು,
ಸುತ್ತಲು ನೀರವ
ರಾತ್ರಿಯ ಭೈರವ
ನರ್ತಿಸಲೆದೆ ತಲ್ಲಣಿಸುವುದು.

ಕಂಗಾಲಾಗಳು
ಹೆತ್ತವನಿರುವನು
ಬೆಂಗಾವಲೊಳೆಂದೆನುತಿಹಳು.
ಹಿಂಗಾರಿನ ಮಳೆ
ಹನಿಯನು ನಂಬದೆ
ಬಂಗಾರದ ಕಣ್ಣಿನ ನವಿಲು ?

ನೆರೆಮನೆಗಳ ಸೊಡ
ರಾರುವ ಮುನ್ನವೆ
ಕುರುಡನ ಮನೆ ಬೆಳಕಾರುವುದು.
ಕಣ್ಣುರುಡಾದರು
ಬರಡಾಗದ ಮನ
ನಿದ್ದೆಯ ಕುರುಡಿನೊಳೊರಗುವುದು.

೨

ಮುಗುಳಾಗಿರೆ ಮು
ಚ್ಚುವನರುಗಂಪನು
ಅರಲಾದರೆ ಮುಚ್ಚಲುಬಹುದೇ ?
ಮುಗುದತನದೊಳಿದೆ
ಮುಚ್ಚಿರೆ ಹರಯದೆ
ತೆರೆಯದೆ ? ಅದ ನಚ್ಚಲುಬಹುದೇ ?

## ಹೊನ್ನಿಯ ಮದುವೆ

ಕೂಸಾಗಿರೆ ಪ್ರೇ
ಮಕೆ ಉಪವಾಸವು;
ಭಕ್ತಿಯು ಪಾರಣೆ; ನುಡಿಮುಡಿಯು;
ತಂದೆಯೆ ದೇವರು;
ಮನೆಯೇ ದೇಗುಲ;
ಬಾಳ್ವುದೆ ಕೊನೆವರೆಗೀಪರಿಯು?

ಮುಂಜಾವದ ಮೂ
ಡಣ ಬಾನಂದದಿ
ಹೊನ್ನಿಯ ಮೊಗ ಕೆಂಪೇರಿದುದು.
ನುಡಿಯಲಿ, ನಡೆಯಲಿ,
ನೋಟದಿ, ಪಾಟದಿ,
ಲಜ್ಜೆಯೆ ಹಜ್ಜೆಯನಿಟ್ಟಿಹುದು.

ಜವ್ವನವೆನ್ನಲೆ?
ಮುದವಿಲ್ಲದ ಮನ.
ಶೈಶವವೆನ್ನಲೆ? ಕದಡು ನಗೆ.
ತಂದೆಯು ಸೇವೆಯು
ನಡುನಡುವಾವೆಯು
ಮಡಿಕೆಯು ತೆರದಲಿ ಕಾವ ಬಗೆ.

ನೋಟಕೆ ಕೊಂಕುತ
ಕೂಟಕೆ ಹಿಂಗುತ
ಆಟಕೆ ನಾಚುತ ತೊಲಗುತ್ತ
ಸುಗ್ಗಿಯು ಮೊದಲಿನ
ಕೋಗಿಲೆ ಹುಗಿಲಿನ
ಬುಗ್ಗೆಯೆನಲು ಸೋರುವ ಚಿತ್ತ.

# ನಲ್ಮೆ

ಬಂತಾಕೆಗೆ ಹರಿ
ಯದವರ.—ದುರ್ವಿಧಿ
ಎಳೆಯರೆದೆಗೆ ಮಾಡುವ ಮಾಟ—
ಗಂಡಿನ ರೂಪವ
ಗಾಡಿಯ ಮೋಡಿಯ
ಕಂಡೊಲಿಯುವ ಕಡೆಗಣ್ಣೋಟ.

ಅದುವೇ ನಮ್ಮಾ
ಹೊನ್ನಿಯ ಪದುಳದ
ಬಾಳುವೆ ತೊರೆಯಲಿ ಸುಳಿಯಾಯ್ತು.
ಅವಳೆದೆ ಜೀವವ
ತರಿಯಲು ಮಸಗುವ
ಕಾಮನಬಾಳಿಗೆ ಗುರಿಯಾಯ್ತು.

ನೆರೆಯೊಳೆ ಪಡಿನುಡಿ
ಯಾಡುವ ದರಿಯಿದೆ;
ಹಸಲೆಯ ಮೇಯುವ ಮಂದೆಗಳು;
ಅಲ್ಲಿಯೆ ಮಾವಿನ
ತೋಹಿನೊಳೊಂದೆಡೆ
ಹಿಂದೋಳದಿ ತೊನೆದಾಡಿದಳು.

ಆವುದೊ ರಸದಲಿ
ಹೊಯ್ದಾ ರಾಗವ
ಮೊಗೆದಳು ನುಡಿಯಲಿ ತುಂಬಿದಳು.
ಹಾಡೊಳು ಸುರಿದಳು,
ಕಂಬನಿಗರೆದಳು,
ಮುಂಗಾರಿನ ತಂಬನಿಯವೊಲು.

## ಹೊನ್ನಿಯ ಮದುವೆ

"ಎನ್ನೀ ರಾಗವ
ಕದ್ದವರಾರೆಲೆ ?
ಕೇಳುವುದಿದೊ ಪಡಿ ನುಡಿಯಾಗಿ!
ಕಣಿವೆಯ ಗುಮ್ಮನ
ಬೆದರಿಸುವಾಟವೊ?
ನೋಡುವೆ"ನೆಂದಿಳಿದಳು ತೂಗಿ.

"ಮಾತೇ ಬಾರದ
ಕಾಡುಗಳೆಲ್ಲಿಯು
ಹಾಡನು ಕಲಿವುವು ? ಹುಚ್ಚಿನಗೆ !
ಆಕಾಶದೊಳೆ
ತ್ರೈತ್ರ್ಯಲೊ ತಿರುಗಿದ
ನುಡಿಯೇ ಹೊಕ್ಕಿತು ಕಿವಿಯೊಳಗೆ !

ಮೊದಲಿನ ರಾಗವ
ಹಾಡುವೆ ನೋಡುವೆ"—
ಎಂದೇರಿದಳಾ ಉಯ್ಯಾಲೆಯ.
ಮೊದಲಿನ ತೆರದೊಳೆ
ಪಡಿದನಿಯಾದುದು
ಬೆಚ್ಚಿಸಿ ಬೆದರಿಸಿ ಬಾಲಿಕೆಯ.

ಥಟ್ಟನೆ ನೆಗೆದಳು;
ದನಗಳ ಕರೆದಳು;
ಗಾಳಿಗೆ ಸಿಲುಕಿದ ಮುಗಿಲೆನಲು
ನೋಟವ ಮಿಂಚಿಸಿ
ಮೊಗವನು ಹೊಂಚಿಸಿ
ತಳುವದೆ ಹೊನ್ನಿಯು ತಳರಿದಳು.

## ನಲ್ಮೆ

"ನಿನ್ನೀ ಹಾಡನು
ಹಿಡಿದುದು ತಪ್ಪೇ ?
ಚೆಲುವೆಯೆ ! ಬೆದರುವೆಯೇಕಿಂತು?
ಎನ್ನದೆ ಕಲಿಯದೆ
ಆನೇ ಕಲಿತೆನೆ?
ಬೈಯೆನ್ನನು ನೀ ಬೇಹಂತು.

ಕೋಪಿಸು, ಜರೆ, ಶಾ
ಪವ ಕೊಡು ಹೊನ್ನಿಯೆ !
ಎಂತಾದರು ನುಡಿ—ಅದೆ ಸಾರ !
ಒಂದೇ ಬಯಕೆಯು
ಅಡಸಿದೆ ನನ್ನಿಯೆ—
ಹಾಡೊಳು ಬೆರಸೆನ್ನಯ ಹೆಸರ.

ಚೆನ್ನಗೆ ಬಿರುದುಗ
ಳಿಲ್ಲೆಲೆ ಕೋಮಲೆ !
ಚೆನ್ನನು ಚೆಲುವನಿದೇ ಬಿರುದು.
ದೇವರು ದಯೆಗೊ
ಟ್ಟೀ ಭಾಗ್ಯವ ನೀ
ಹರಸುತ ನುಡಿಯಲಿ ಸುರಿ ಕೋದು.

ಎನಿತೋ ಸಂಜೆಯು
ಕಳೆದೆಸು ನಲ್ಲಳೆ !
ಈ ಕಣಿವೆಯೊಳಿಲ್ಲಿಯೆ ನಿಂದು.
ನೆಳಲಲಿ ಕೆಳೆತನ
ಮಾಡಿದೆ ಕೇಳಿದೆ—
ಕಂಡಿರೆ ನೀವಾಕೆಯನೆಂದು.

## ಹೊನ್ನಿಯ ಮದುವೆ

ಕಾಡಿನ ಹಕ್ಕಿಯು
ತಿಳಿದಿದೆ ನಿನ್ನೀ
ಗೂಢವ, ಚಲಿಪಿಲಿ ದನಿಯಿಂದ
ಹೇಳಿತು—ಮೂಢನೆ!
ನಾಡಿನ ಗೌಡನ
ಮನೆ ತುಂಬುವ ತೆನೆಯಿವಳೆಂದ.

ಎನ್ನೆದೆ ಹೌವನೆ
ಹಾರಿತು ಹೊನ್ನಿಯೆ!
ಎನಗೂ ನಿನಗೂ ಬಲು ದೂರ!
ಸೌಭಾಗ್ಯದ ಸಾ
ಗರದಾಚೆಯು ದಡ
ನಿನ್ನದು—ನನ್ನದು ಈ ತೀರ.

ಎರಡು ದಿನದಿ ದುಡಿ
ದರೆ ಒಂದೂಟಕೆ
ಬರುವುದು ನಮ್ಮಯ ಸಂಪತ್ತು.
ಗ್ರಾಮದ ಹಿರಿಯನ
ಜೊಚ್ಚಲು ಕುವರಿಗೆ
ಸಾಲುವುದೇ ಬಡವನ ತುತ್ತು?

ಮರುಳಿದು—ಬಲ್ಲೆನು
ಎನ್ನೊರೊಡತಿಯೆ!
ನಲ್ಮೆಯೆ ಮರುಳಾಗಿರಲದರ
ಗೆಯ್ಮೆಯೊಳಃವುದು
ಹುರುಳೆಂದೆನುವುದು?
ಜಪಿಸುತಿರುವೆ ನಿನ್ನಯ ಹೆಸರ.

## ನಲ್ಮೆ

ಹಾಡೊಂದನು ಕ
ಟ್ಟುತ ನಿನಗೊಪ್ಪಿಸೆ
ಬರೆದೋದಿದ ಸೈಪೆನಗಿಲ್ಲ.
ಅಕ್ಕರೆಯೆಂಬುದೆ
ಅಕ್ಕರವೆನಗದೆ
ಬರೆದೊಪ್ಪಿಸಿತೀ ಸವಿಸೊಲ್ಲ.

ಕೇಳುವೆನೊಂದನು—
ಸಿರಿವಂತನ ಸುತೆ
ಸಿರಿಯೊಂದಕೆ ಮೋಹಿಸಲಹುದೆ?
ಹಣ ಕಾಸುಗಳಾ
ಡುವ ಕೈಹಿಡಿದರೆ
ಮನವೂ ಹಿಡಿಯಲಿ ದೊರೆಯುವುದೇ?

ಬಡಜನರನುಭವ
ವಿಂತಿದೆ—ಪಂತದೆ
ತಡೆದರು, ಬಗೆ ಹರಿದೆಲ್ಲೆಲ್ಲಿ
ಸಿರಿಯೋ ಬಡತನ
ವೋ! ಸೆರೆಗೊಂಬುದು
ಮೆಚ್ಚಿದವಳ ಮುಂಗುರುಳಿನಲಿ.

ನಿಜವನು ನುಡಿ! ಬಾ
ಲಿಕೆ! ನಿಷ್ಠುರತೆಗೆ
ಬೆದರದೆ ನುಡಿ ತುಟಿಗಳನೆತ್ತಿ.
ಬಡವರ ನಲ್ಮೆಗು
ನಿಮ್ಮಯ ಕೂರ್ಮೆಗು
ಭೇದವಿಹುದೆ? ಹೇಳೊತ್ತೊತ್ತಿ.

ಹೊನ್ನಿಯ ಮದುವೆ

ಒಂದಾದರು ಮಾ
ತಾಡೆಯ ಮೋಹಿನಿ ?
ಮಾತಿನ ತುಟಿಗೇತಕೆ ಮುದ್ರೆ ?
ತಾನೇ ಬರುವಾ
ಸಾವನು ಕರೆಯದೆ
ಪುಣ್ಯವ ಸಂಪಾದಿಸು—ಭದ್ರೆ !"

ಈಪರಿ ನುಡಿಯುತ
ಸಡಗರದಿಂದಲಿ
ದಾರಿಯನಡಹಾಯ್ದನು ತರುಣ.
ಗಿರಿಯಿಂದುರುಳುವ
ನಿರ್ಝರದಂದದಿ
ಅವಳಡಿಯಲಿ ಬಿದ್ದನು ಚೆನ್ನ.

"ಆರಿಲೆ ಜವ್ವನ
ನೋಡಲು ಕಾವನ
ಕಾಲಾಳಂದದಿ ಬಂದಿರುವೆ ?
ಲೋಕದ ರೀತಿಯ
ನೀತಿಗಳರಿಯದೆ,
ಏನೇನೋ ಗಳಹುತಲಿರುವೆ.

ಊರಿನ ಮುಂದಿಗೆ
ತೋರುತ ದಾರಿಯ
ನಡೆಯಿಪನಲ್ಲವೆ ಎನ್ನ ಪಿತ ?
ಕಟ್ಟೆಂದರೆ, ಹಳೆ
ಕಟ್ಟಳೆಯೆಂದರೆ
ಆತನ ಸುಳಿಯಿಪ ಪುಣ್ಯ ಪಥ.

ನಲ್ಕೆ

ಹೆತ್ತವನೆಂದರೆ
ಹೊತ್ತವನಲ್ಲವೆ?
ಹಲವು ಬರಿಸ ಹೊರೆದವನಲ್ಲಾ?
ತನುವೋ ಜೀವವೊ
ಮೆಯ್ಸಿರಿಯೆಲ್ಲವು
ಆತನು ಕೊಟ್ಟಾ ಋಣವಲ್ಲಾ?

ಕಂಡವರನು ಕೈ
ಹಿಡಿದರೆ ತಂದೆಗೆ
ಕೆಂಡ ಮುನಿಸು ಬಾರದೆ ಇಹುದೆ?
ಕುಲದೈವದ ಚಾ
ವಡಿ ಗುಡಿ ದೆವ್ವದ
ಶಾಪವು ನಮ್ಮನು ಸುಡದಿಹುದೆ?

ಕುಲದಲಿ ಜನ್ಮವ
ನಾವೇ ಕೊಂಬೆವೆ?
ಸಿರಿಯನು ನಾವೇ ಪಡೆಯುವೆವೆ?
ನಳನಳಿಸುವ ಮೆಯ್
ಸಿರಿ ನಮ್ಮೊಡವೆಯೆ?
ನಮಗವುಗಳ ಮೇಲೊಡೆತನವೆ?

ಈ ಪರಿಯಲಿ ಕೈ
ಹಿಡಿವುದು ಬಿಡುವುದು
ನಮ್ಮಧಿಕಾರಕೆ ಸೇರದದು.
ಮನೆತನಗಳ ನಡೆ
ವಳಿಯೆಂತಂತೆಯೆ
ನಡೆವುದೆ ನಮ್ಮಯ ಕುಲ ಬಿರುದು."

## ಹೊನ್ನಿಯ ಮದುವೆ

ಇಂತಾಡುತೆ ನಿ
ಟ್ಟುಸಿರನು ಕರೆದಳು,
ನಿಟ್ಟುಸಿರಿನ ಭಾವನೆಯೇನು ?
ಮೊಗ ನೇತಾಡಿತು,
ಬಾಗಿತು, ಕಂಬನಿ
ಸುರಿದುದದರ ಅರ್ಥಗಳೇನು ?

'ಅಂಬಾ !' ಎನ್ನುತೆ
ದನಗಳು ಕರೆದುವು,
ತಾವರಿ ಮೊಗಕಿಬ್ಬನಿಯಾಯ್ತು.
ಕಡಲಿಂದೀ ಕಡೆ
ಕಲರವ ಗೈಯುತೆ
ಹಾರ್ವುವು ಹಕ್ಕಿಗಳಿಳಿಹೊತ್ತು.

ಪಡುಗಡಲಿನ ತೆರೆ
ತಳ್ಕೆಯ ಸೇರುತ
ಬಿದ್ದನದೋ ರವಿ ನಿದ್ದೆಯಲಿ.
ನಡುವಣ ದೇಗುಲ
ದಾ ಘಂಟಾರವ
ಘಣ ಘಣಿಪುದು ಗವಿ ಕಿವಿಗಳಲಿ.

ಹಿನ್ತೋಟದೊಳಾ
ಚೆನ್ನನ ನೋಡುತ
ಕಣ್ಣೀರೊಂದನು ಸುರಿಸಿದಳು.
ಕಟ್ಟಳೆ ಮೀರುವ
ಹೆಣ್ಣೇ ? ಎನ್ನುತ
ನಿಟ್ಟೋಟದಿ ಮನೆ ಸೇರಿದಳು.

# ನಲ್ಮೆ

ನೀಲಾಕಾಶದ
ಬಣ್ಣದ ಚೇಲವು
ಕತ್ತಲೊಳೆಲ್ಲಿಯೊ ಮರೆಯಾಯ್ತು.
ಹಿಂಬಗಲಿನ ಬ
ಣ್ಣದ ಮೊಗವಿವನದು
ಎಲ್ಲೆಲ್ಲಿಯು ಕಾಣಿಸದಾಯ್ತು.

*　　*　　*

ನಾಡುಗರಾರೋ
ಬಂದಿಂತೆಂದರು—
ಏನಿದು ಪರಿ ಗುರಿಕಾರನಲಿ ?
ಮಗಳನು ಮನೆಗೆಂ
ದೆನುತಲೆ ಪಡೆದನೆ ?
ಸಡಿಲಿತೆ ಪದ್ಧತಿ ಹಿರಿಯನಲಿ ?

ಜವ್ವನಿಗರು ಹಲ
ರಿಲ್ಲವೆ ? ನಮ್ಮಯ
ಗೊತ್ತಿನವರ ಮಕ್ಕಳನರಸಿ,
ಚೆನ್ನಿಗನೊಬ್ಬನ
ಕೈಗಿಡು ಮಗಳನು ;
ಆಗಲವಳು ಎಳವೆಯೊಳರಸಿ.

ಊರಿದು ಕನ್ನಿಕೆ
ಹೆಂಗಳಿಗೊಪ್ಪದು ;
ಕೆಡುಗಂಗಳು ಹಲವಿಹವಿಲ್ಲಿ.
ಚೆಲುವೆಗೆ ನಂಜಿನ
ಗಾಳಿಯು ಸೋಂಕಿಪ
ಭೂತಗಳಿವೆ ಹಲವಲ್ಲಲ್ಲಿ.

## ಹೊನ್ನಿಯ ಮದುವೆ

ಕಣ್ಣಿದ್ದರು ಕಾ
ಣದು ಮುಂದಣ ಗತಿ,
ಹೊನ್ನಿದ್ದರು ಕೆಡು ನುಡಿಬಹುದು.
ಕೆಡು ನುಡಿಯೊಂದೇ
ಹರಯದ ಬಾಲೆಯ
ಸಿಡಿಲಿನ ಪರಿ ಕೆಡೆಯಿಸಬಹುದು.

ಕುವರರ ಪಡೆವಾ
ಭಾಗ್ಯವನರಿಯೆನು,
ಹೆಣ್ಣನು ಹೆತ್ತನುಭವವಿಹುದು.
ಅನ್ನಿಗರೊಡವೆಯ
ಬೇಗನೆ ಕೊಡುವುದು—
ತಂದೆಯ ಜೀವದ ನೋಂಪಿಯದು.

ಇದಕಾ ಮುದುಕನು
ಕಣ್ಣೀರೊರಸುತ—
"ಸಮಯದಿ ಬಂದುದು ಹಿತವಾದ;
ಕೊಡುವೆನು ಮಗಳನು
ನಾಡಿನ ಗೌಡನ
ಮಗನಿಗೆ ಧಾರೆಯನೆರೆದೆಂ"ದ.

ಬಾಗಿಲ ಮರೆಯಲಿ
ಹೊನ್ನಿಯ ನೋಟವು
ಹೊಂಚಿತು ಮಿಂಚಿನ ವೇಗದಲಿ.
ನೀಳ್ದನಿ ಮೊಳಗಿತು
ಕಂಬನಿಯುದುರಿತು
ಬಗೆ ಮುಸುಕಿದ ಮಳೆಗಾಲದಲಿ.

# ನಲ್ಮೆ

೩

ಪಡುವಣ ತೀರದ
ಕನ್ನಡ ನಾಡಿನ
ಕಾಂಗಾಲದ ವೈಭವವೇನು ?
ಚೆಲ್ಲಿದರನಿತೂ
ತೀರದ ನೀರಿನ
ಜಡದೇಹದ ಕಮುಗಿಲೇನು ?

ಕೆರೆಗಳನುಕ್ಕಿಸಿ
ತೊರೆಗಳ ಸೊಕ್ಕಿಸಿ
ಗುಡ್ಡವ ಬೆಟ್ಟವ ಕೊರೆಕೊರೆದು.
ಕಡಲಿನ ತೆರೆಗಳ
ರಿಂಗಣ ಗುಣಿಯಿಸಿ
ಮೊರೆ ಮೊರೆವುದದೋ ಸರಿಸುರಿದು.

ಕುದುರೆಮೊಗದ ಕಡಿ
ವಾಣದ ತೆರದಲಿ
ಮಿಂಚುಗಳವು ಥಳಥಳಿಸುವುವು.
ಗೊರಸಿನ ಘಟ್ಟನೆ
ಯಂತಿರೆ ಥಟ್ಟನೆ
ಗುಡುಗುಗಳವು ಗುಡುಗಾಡಿಪುವು.

ಆವೇಶದ ವೇ
ಷದ ಬಿರುಸುಟ್ಟುರೆ
ಊರೂರಲಿ ಹಾರೋಡುವುದು.
ಮರಗಳ ಕೀಳುತ
ಬಂಡೆಯ ಹೋಳುತ
ಜಗಜಟ್ಟಿಯು ತೆರನಾಡುವುದು.

## ಹೊನ್ನಿಯ ಮದುವೆ

ಹಗಲಿರುಳೆನ್ನದೆ
ಹೊಡೆಯುವ ಜಡಿಮಳೆ
ಬಡಿಕೋಲ್ಮಿಂಚಿನ ಲಾಗುಗಳು.
ಮನೆಗಳ ಮನಗಳ
ಒಳಗೂ ಹೊರಗೂ
ಜಿನುಗುತಿರುವ ಹನಿ ಸೋನೆಗಳು.

ಮುಗಿಲಿನ ಹುಬ್ಬಿನ
ಗಂಟಿಕ್ಕುತ ಬಿರು
ದನಿಯಲಿ ಬೆದರಿಸುತಿಹನಲ್ಲ.
ನಲ್ಲನೆನುತೆ ಆ
ಗಸವೆಣ್ಣಾಗುತೆ
ಸುರಿಸಿದ ಕಣ್ಣೀರ್ವೊನಲೆಲ್ಲ.

ಅತ್ತತ್ತೂ ಆ
ಯಸದಲಿ ಸತ್ತೂ
ಸಾಯದೆ ನೋವನು ಹಿಂಗಿಸುತ,
ಎಂತಾದರು ಬಾ
ಳಲೆ ಬೇಕೆನ್ನುತ
ದೆಸೆಯಿರ್ದುದು ಬಗೆ ತಿಳಿಯಿಸುತ.

ಮಳೆ ಕುಂದಿತು, ನೆರೆ
ಯಿಳಿದುದು, ವಾಹಿನಿ
ಎದೆ ಕೆಸರೆತ್ತಲೊ ಹೋಗಿರಲು
ತಿಳಿವಿನ ತೆಳುವಿನ
ಅಲೆಗಳ ವಲಿಗಳ
ಬಲೆಯಲಿ ನೇಸರ ಹಿಡಿದಿರಲು.

# ನಲ್ಮೆ

ಹೊಸ ಹಸುರಿನ ತೊಡ
ವುಟ್ಟಳು ಮೇದಿನಿ,
ಚಿಗುರ ವೊಗಕೆ ಮುಗುಳಿನ ನತ್ತು,
ಕರ್ವೋಡದ ಕು
ಪ್ಪುಸವನು ಬಿಟ್ಟಳು,
ಬೆಳ್ಮುಗಿಲಲಿ ಗೈದಳು ಹೊಸತ.

ಮುದುಕನ ಮನೆಯಲಿ
ಮದುವೆಯ ಸನ್ನಣ—
ಹೊನ್ನಿಯ ಬಾಳುವೆಯತಿಥಿಯನು.
ಕರೆಯಲು ಕೈ ನೀ
ರೆರೆಯಲು ಸಮೆದರು
ಚೆನ್ನಿನ ಚಪ್ಪರ ಹಂದರನು.

ನಾಡಿನ ಹಿರಿಯನ
ಸಿರಿವಂತನ ಮನೆ;
ಒಬ್ಬಳೆ ಮಗಳಾ ಮದುವೆಯಲ!
ಆತನ ಲೋಕದ
ಕೊನೆಯುತ್ಸವವದು;
ಎನಿತೋ ಸಂಭ್ರಮವಿರುವುದಲ!

ಅಂದಣವೇರಿಯೊ
ಕುದುರೆಯನೇರಿಯೊ
ಗೌಡನ ಮಗ ಬಾರನೆ ವರಿಸೆ?
ಪಟ್ಟೆಯ ಸೀರೆಯೊ
ಜರಿಕುಪ್ಪುಸಗಳೊ
ಬಾರವೆ ಹೊನ್ನಿಯ ಸಿಂಗರಿಸೆ?

## ಹೊನ್ನಿಯ ಮದುವೆ

ಬಾಳೆಯ ತೋರಣ,
ಚಿಗುರಿನ ಜಲ್ಲರಿ,
ಸುರಗಿಯ ಮೊಲ್ಲೆಯ ಜಲ್ಲಿಗಳು,
ಹಣ್ಣಡಕೆಯ ಹೊಂ
ಬಾಳೆಯ ಗೊನೆಗಳ
ತೂಗಿಸಿದರು ಮೇಲ್ಕಟ್ಟಿನೊಳು.

ಆನೆಯನೇರಿಯೆ
ಬಂದರು ಸಾಲ್ವದು
ಮಂಡಪದೆತ್ತರ— ಮೇಲಾಗಿ
ಸಿಂಗರ ಬಿತ್ತರ
ಗೈದಿಹರೆಲ್ಲರು
ಕರೆಯದೆ ಬಾಂಧವರೊಂದಾಗಿ.

ಮಂಡಪವೇತಕೊ
ಸಿಂಗರವೇತಕೊ
ಆರಾದರು ನೋಡಿದರೇನು ?
ಗತಿಯನು ಮರಸಲೊ
ವಿಧಿಯನು ಮುಚ್ಚಲೊ
ತಮ್ಮನೆ ವಂಚಿಪ ಹದನೇನು ?

ಬಡವೆಯು ಹೊನ್ನಿಯು
ಮನದುಮ್ಮಳವನು
ಕಂಡವರುಂಟೇ ? ಸೆಡವಿನಲಿ
'ಗೌಡನ ಮಗ' ಎಂ
ದರೆ ಬಗೆಯೊಲಿವುದೆ ?
ಮರುಮಾತಾವುದು ಹಡೆದರಲಿ ?

## ನಲ್ಲೆ

ಒಂದೊಂದೇ ಹನಿ
ಕೂಡಿದ ತೆರದಲಿ
ಬಂಧುಗಳೆಲ್ಲರು ಬರುತಿರಲು
ಒಂದೊಂದೇ ಮಡಿ
ಹೆಚ್ಚಿದುದಾಕೆಯ
ಬಸಿರೊಳಗೇ ಕೊಳ್ಕುದಿವಳಲು.

ಏನೆಲೆ ಹೊನ್ನಿಯೆ !
ಕುಳಿತಿಹೆ ಬಿಮ್ಮನೆ
ಮದುವೆಯೆನಲು ಮಾರಿಯ ಬಲಿಯೆ ?
ಬಾರೊಡಗೂಡೆಲೆ
ಚೆಲುವೆಯೆ ! ಲಜ್ಜೆಯ
ಬೀರೆನ್ನುತ ಗೆಳತಿಯರೊರೆಯೆ—

ಹೆಣ್ಬಲಿಯಲ್ಲವೆ ?
ಮನದೊಲವಿಲ್ಲದೆ
ಅವಳನು ಗಂಡೊಬ್ಬನ ಮನೆಗೆ
ನೂಕಲು ಮದುವೆಯೆ ?
ಎನ್ನುತ ಮೌನದೆ
ಗಳಹುತಿಹಳು ಹಲುಬುವಳೊಳಗೆ:—

ವಾದ್ಯದವರ್ ತಂ
ಬಟೆಯುವರೆಲ್ಲರು
ಬಂದರು, ನಾಳೆಯು ಬೆಳಗಿನಲಿ
ಧಾರೆಯನೆರೆವರು
ಶೋಭನವೊರೆವರು
ಮದುವೆ ಮುಗಿವ ಸಂತೋಷದಲಿ.

# ಹೊನ್ನಿಯ ಮದುವೆ

ಪಡುಗಡಲಿನ ತಡ
ಗುಂಡಿಯೊಳೊಂದೆಡೆ
ಹಸೆಯನು ಹಾಸಿಹರೆನಗಾಗಿ.
ಮಣಿಗಳ ಬೆಳ್ಮು
ತ್ತುಗಳನು ಸುರಿವುವು
ಮರಿಮೀಂಗಳು ಸಿಂಗರಕಾಗಿ.

ಆಳದೊಳೊಂದೆಡೆ
ತೆರೆಯೊರಗುವ ಕಡೆ
ಕಡಲಿನ ಮಂದಿಯ ಬಳಗದಲಿ
ಒಂದೇ ಹಂದರೊ
ಳೊಂದೇ ಭಾವದಿ
ಕೂಡಲಿಹೆವು ಸುಖ ಶಾಂತಿಯಲಿ.

ನಾಳೆಯ ಮುಂಜಾ
ವದ ಕಿರುಬೆಳ್ಳಿಯು
ಮೂಡಲಿ ಹಿಡಿಯಲಿ ಕಕ್ಕಡವ.
ಹೊನ್ನಿಗೆ ಚೆನ್ನಗೆ
ದಾರಿಯ ತೋರಲಿ
ಕತ್ತಲೆ ಕವಿಯಲಿ ಪಂಡಪವ.

ಹುಟ್ಟಿನ ತೊಟ್ಟಿನ
ತಂದೆಯ ಮರೆಯುವೆ,
ಹುಟ್ಟು ಮನೆಯ ಮಾಡವ ಮರೆವೆ;
ಕನ್ನಡ ನಾಡಿನ
ಪಡುವಣ ಕಡಲಲಿ
ಕಣ್ಮುಚ್ಚುತೆ ನಿದ್ರಿಸುತಿರುವೆ.

*   *   *   *

# ನಲ್ಮೆ

ಮರುಳೇನೋ ಈ
ಚೆಲುವೆಗೆ ? ಸಾವನು
ಬೆದಕುವಳಲ್ಲವೆ ಜವ್ವನದಿ ?
ಬಾಳುವೆಯಾಸೆಯೆ
ಇಲ್ಲವೆ ಮುಗುದೆಗೆ ?
ಮರುಕವ ತೋರಳು ನಗೆಮೊಗದಿ.

೪

ಮದುವೆಯ ದಿನ-ಮುಂ
ಜಾವದ ಕೋಳಿಯು
ಕೆಲೆವ ಮೊದಲೆ ಗಜಬಜವಾಯ್ತು.
ಮದುಮಗಳಾವಳು ?
ಮೊಗವನೆ ತೋರಳು !
ಮದುವೆಯ ಗಳಿಗೆಯುದೋ ಬಂತು.

ಮೂಡಣ ಬಾನನು
ನೋಡಿದರೊಮ್ಮೆಗೆ,
ಪಡುಗಡೆಯಲಿ ಕಣ್ಣಿಕ್ಕಿದರು.
ಮೂಡುವ ನೇಸರ
ಮುಳುಗುವ ಚಂದ್ರನ
ನೋಡುತೆ ತವಕವ ಹೊಂದಿದರು.

ಗಳಿಗೆಯು ಬಟ್ಟಲು
ವಂಚಿಸದೆಮ್ಮನು;
ಹೊತ್ತೇರುವುದೋ ಏರುವುದು.
ಕರೆಯಿರಿ ಮಗಳನು
ಹಿರಿಯರೆ ! ದಿಬ್ಬಣ
ನೆರೆಮನೆಯಂಗಳಕಿಳಿದಿಹುದು.

## ಹೊನ್ನಿಯ ಮದುವೆ

ಮದುಮಗಳೆಲ್ಲಿಹ
ಳೆಯ್ಯೋ ಕಾಣಳು
ಹುಡುಕಿರಿ! ನಡೆಯಿರಿ! ತಳುವದಿರಿ.
ಕಿರಿಹೆಣ್ಣಲ್ಲವೆ ?
ನಾಚುತ ಮನೆಯೊಳೆ
ತಲೆಮರೆಸಿಹಳೋ ಶೋಧಿಸಿರಿ.

ಮದುಮಗಳಿಲ್ಲದ
ಮದುವೆಗೆ ವಾದ್ಯವೆ ?
ಊದದಿರೆಲೆಲೇ ಕಹಳೆಗಳ.
ದಿಬ್ಬಣ ತಿರುಗಲಿ !
ಮಗಳನು ಕಂಡರೆ
ಹೊರಿಸುವೆ ಭೂತಕೆ ಹರಕೆಗಳ.

ಇಂತಾ ಮುದುಕನು
ಬೊಬ್ಬಿರಿದಿರ್ದನು;
ಮದುವೆಯ ಮನೆ ಕಳಕಳಿಸಿತ್ತು.
ಹುಟ್ಟು ಹರಿಯೆ ಗುಮು
ಗುಮಿಸುತೆ ಹಾರುವ
ಜೇನ್ನೊಣಗಳ ಗಜಬಜೆಯಾಯ್ತು.

ಗೋಳಿಟ್ಟೆಂದನು:—
ಹೊನ್ನಿಯೆ! ಜೀವವೆ!
ಕಣ್ಣೇ! ಗತಿಯೇ! ಬಾರಿಂದು.
ಮದುವೆಯ ಮಾಡೆನು
ಕಟ್ಟನು ಮೀರ್ವೆನು.
ಮೂಡೆಲೆ ಹೊಂಬಾಳೆಯ ಕಂದು!

## ನಲ್ಮೆ

ಮದುವೆಯೆನಲು ಹಿರಿ
ಹಿಗ್ಗುವರಲ್ಲವೆ
ನಿನ್ನೀ ಹರೆಯದ ಕನ್ನೆಗಳು ?
ತಿಳಿಯದೆ ಮಾಡಿದೆ—
ಕುರುಡನ ಬುದ್ಧಿಯು
ಕುರುಡಾದುದ ಮರೆ! ಬಾ ಬಾಳು!

ಮಗಳೇ! ತಂದೆಯ
ನುಡಿಯೆನೆ ದೈವದ
ನುಡಿಯೆಂದೇ ನೀ ಭಾವಿಸಿದೆ;
ಇದಿರಿದಿರಾಡುವ
ಪದ್ಧತಿಯಿಲ್ಲದೆ
ಇಂದೆನ್ನನು ನೀ ವಂಚಿಸಿದೆ.

ಎಲ್ಲವು ಕಸ್ಸಾ
ಯ್ತಲ್ಲವೆ ಹೊನ್ನಿಯೆ ?
ಮರುಮಾತಾಡುತ ಬಾರೀಗ
ಆರಾಗಲಿ! ನಿ
ನ್ನಯ ಬಗೆ ಮೆಚ್ಚಲು
ಧಾರೆಯೆರೆವೆ—ಮೊಗದೋರೀಗ.

ಮಗಳಿನ ರೂಪವ
ನೋಡುವ ಭಾಗ್ಯವ
ಎಂದೋ ಕಳೆದಿಹುದೀ ದಿಟ್ಟಿ.
ಮಾತಿನ ದನಿಯೊಳೆ
ರೂಪವ ಕಂಡೆನು;
ಅದಕೂ ಬಂದುದೆ ಈ ತುಟ್ಟಿ ?

## ಹೊನ್ನಿಯ ಮದುವೆ

ಮುನಿಸಿನೊಳಿರುವೆಯೊ?
ನಾಚುತಲಿರುವೆಯೊ ?
ನುಡಿಯಿಲ್ಲದ ನಾಡಿಗೆ ನಡೆದು,
ಕಿವಿಗೂ ಕೇಳದ
ಸಂಚನು ಗೈದೆಯೊ ?
ನಿನ್ನದು ಹದನೇನೆಲೆ ಮುದ್ದು ?

*　　*　　*　　*

ಮೊದಲೇ ಹೇಳಿದೆ
ವಲ್ಲವೆ ಕುರುಡರಿ !
ನಮ್ಮಾನಾಡಿನ ಭೂತಗಳು
ಕನ್ನಿಕೆ ಹೆಂಗಳ
ಮೋಸಲುಗೆಡಿಪುವು;
ಎಂದವಗೊರೆದರು ಗುಟ್ಟಿನೊಳು.

ಮದುವೆಯ ದಿನದಲಿ
ಮೂಡಿದ ನೇಸರು
ನಡುನೆತ್ತಿಗೆ ತಾನಡರಿದನು.
ಊರೂರಲೆದರು
ಸೇರಿದ ನಂಟರು;
ಕಂಡರಿ ಬಡವೆಯ ಹೊನ್ನಿಯನು ?

ಓಡುತಲೋಡುತ
ಎದೆ ತಿದಿಯೊತ್ತುತ
ನಿಟ್ಟುಸಿರಿಂದಲಿ ಬುಸುಗುಟ್ಟಿ
ಅಂಬಿಗನೊಬ್ಬನು
ಬಂದಿಂತೆಂದನು:—
ನಂಬಿರಿ ! ನುಡಿವೆನು ಮನಮುಟ್ಟಿ.

## ನಲ್ಮೆ

ಅಯ್ಯಯ್ಯೋ ! ಮುಂ
ಜಾವದ ನಿದ್ದೆಯು
ಒಡಲನು ಬಗೆದದ್ಭುತವೊಂದು
ಕಂಡುದು ಕಣ್ಣಿಗೆ
ಸವಿಗನಸಿನ ಹಗೆ !
ಹೇಳಲು ನಾಲಗೆ ಸುಕ್ಕುವುದು.

ನೆರೆಮನೆಯೊಳೆ ಬೀ
ಡಾರವ ಮಾಡಿದ
ಎಳಹರಯದ ಚೆನ್ನನ ಕೂಡಿ
ಚೆಲು ಪುತ್ತಳಿ, ಸಿರಿ
ಗಣ್ಣಿನ ಪುತ್ರಿಕೆ !
ನಡೆದಳು ಮುಂದಕೆ ತೆರೆಗಾಡಿ.

ನಿಟ್ಟುಸಿರಿರ್ದುದೊ ?
ನಗೆ ಗಹಗಹಿಸಿತೊ ?
ತೆರೆಗಳ ದನಿಯಲಿ ಕೇಳಿಸದು.
ಕಂಬನಿಯಿರ್ದುದೊ ?
ಮೊಗ ಗೆಲವಿರ್ದುದೊ ?
ದೂರದಿ ಕಣ್ಣಿಗೆ ಕಾಣಿಸದು.

ಮಿಾವರೊ ಮುಳುಗುವ
ರೋ ! ನಾವರಿತೆವೆ ?
ಬಲೆ ಕಣ್ಣಿಯ ಹೆಣೆಯುತ್ತಿರಲು.
ದುಮುಕಿದರಾ ಕಡೆ—
ಪಡುಗಡಲಿನ ತೆರೆ
ಕುಣಿ ಕುಣಿದಾರ್ಭಟಿಸುತ್ತಿರಲು.

## ಹೊನ್ನಿಯ ಮದುವೆ

ಗರ್ಜಿಸಿ ಗರ್ಜಿಸಿ
ಕಿರಿ ಹುಲ್ಲೆಯ ಮೇಲ್
ಹಾಯ್ದು ಬರುವ ಹೆಬ್ಬುಲಿಯಂತೆ.
ಭೋರ್ಭೋರ್‍ರೆನ್ನುತ
ತೆರೆಗಳು ಹೊಡೆದುವು
ಗಾವುದ ದೂರಕೆ ಸಿಡಿವಂತೆ.

ಕಡಲೊಡೆಯನು ಮುನಿ
ದಿಹನಿಂದಲ್ಲವೆ ?
ಕಾಣದೆ ತೆರೆಗಳ ಕೊತ್ತಳವು ?
ಏರಿದೆ ಬಾನಿಗೆ !
ದೋಣಿಯು ಹರಿಯಿಪ
ಹದನೆಂತೋ ಅರಿಯೆವು ನಾವು.

ತೀರದೆ ನಿಂತೆವು
ದೂರದೆ ಕಂಡೆವು
ಕರ್ಮುಡಿ ಸುತ್ತಿದ ತಲೆಯೊಂದ;
ತಳತಳಿಸುವ ಹಣೆ
ಯೊಂದನು ಕಂಡೆವು;
ಅದುವೇ ಚೆನ್ನನ ಮೊಗದಂದ.

ಸಾವನು ನೋಡುತ
ಬೆದರುತ ನಿಂತೆವು
ನಾವೂ ಸಾವುದ ಮರೆತಿರ್ದು;
ಜೀವವ ಹಿಡಿದೆವು,
ಹಿಡಿದಾ ಜೀವವು
ಹಾರುವುದೆಂಬುದ ತಿಳಿದಿರ್ದು.

# ನಲ್ಮೆ

ಒಡೆಯರೆ! ಎನಿತೋ
ಮಂದಿಯ ತಂದೆವು
ಕಡಲ ತೆರೆಗಳನು ಅಡಹಾಯ್ದು;
ದೋಣಿಯ ಬಿಜ್ಜೆಗೆ
ಪಾಪವ ತಂದೆವು
ಇಂದೀ ಜೀವವ ಹಿಂದೊಯ್ದು.

ಹೇಳಿದುದಾರಿಗೊ!
ಕಣ್ಗುರುಡನ ಕಿವಿ
ಕಿವುಡಾಗಿರ್ದುದು; ಕಣ್ಣಾಲಿ—
ಕಳೆಗೆಟ್ಟಿರ್ದುದು;
ತನುವಿನ ಮೀಡುಕವು
ಅಲ್ಲಿಯೆ ಸೇರಿತು ಶಾಂತಿಯಲಿ.

ಜೀವದ ಪುತ್ತಳಿ
ಯನು ಹುಡುಕಾಡಲು
ಕುರುಡನದೆಲ್ಲಿಯೊ ಮರೆಗೊಂಡ.
ಮದುವೆಯ ಹಂದರು
ಹಸುರಿನ ಮಂಡಪ
ಆದುದವರ ಮಸಣದ ಮಾಡ.

ದಿನಗಳು ಕಳೆದುವು
ನೆನಪಿನ ನಾಡಿಗೆ
ಒಯ್ದುವು ಹೊನ್ನಿಯ ಚೆನ್ನನನು.
ಹೊಸ ಹೊಸ ವರ್ಷದ
ಪರದೆಯುಸಿಕ್ಕುತ
ವಿಧಿಯುದನೂ ಮರೆಮಾಜುವನು.

## ಹೊನ್ನಿಯ ಮದುವೆ

ಕಡಲತಡಿಯ ಮಳ
ಲೊಟ್ಟಿಲೊಳೊಂದೆಡೆ
ಕೇಳುವುದೊಮ್ಮೊಮ್ಮೆಗೆ ಕೂಗು.
ಸುಯ್ಯುವ ತೆರದಲಿ
ಹಲುಬುವ ತೆರೆದಲಿ
ಬಯ್ಯುವ ಹೊಯ್ಯುವ ದನಿ ಸೋಗು.

ಇರುಳ ಮೊದಲ ಮುಂ
ಜಾವದೊಳೊಮ್ಮೆಗೆ
ತಿಂಗಳು ಬೆಳಕಿನ ನೆಳಲಂತೆ.
ಏನೋ ಕಾಂಬುದು!
ಭೂತದ ದಂಪತಿ
ಅಲ್ಲಿ ನಲಿವುದೆಂಬುದು ವಾರ್ತೆ.

ಒಡಲ ನಡುವೆ ಜೀ
ವವು ಕುಣಿಯುತ್ತಿರೆ
ಅದರಳವನು ನೋಡುವರುಂಟೆ ?
ಸಾಯಲು—ಭೂತವು
ನಲಿವುದ ಕಾಂಬೆವು
ನಮ್ಮ ತೆರದ ಗಟ್ಟಿಗರುಂಟೆ ?

ಕಟ್ಟಳೆ ಕಟ್ಟಿತು
ಹೊನ್ನಿಯ ಚೆನ್ನನ
ತನುಗಳ ಹಿಡಿದೀ ನೆಲದಲ್ಲಿ.
ಕಟ್ಟಳೆಯುಂಟೇ ?
ಕಟ್ಟುಗಳುಂಟೇ ?
ನಡುಗಡಲಿನ ತೆರೆಯಾಳದಲಿ ?



# ಮಾದ್ರಿಯ ಚಿತೆ

೧

“ಕಾಡಬಳಗದ ಸಸ್ಯ ಶಾದ್ವಲದ ಶಾಂತಿಯಲಿ
ತಲೆಗರೆದ ತತ್ವಗಳನರಸು;
ಬಾಳುವೆಯ ನಡುಹಗಲ ಕವಿವ ಚಿಂತೆಯ ಮುಗಿಲ
ತೊಲಗಿಸುತ ಕಂಬನಿಯನೊರಸು.—”

ತಿಳಿವೊಸರ ಚೆಲ್ಲುವರ ಸವಿನುಡಿಯ ಹರಕೆಯಿದು
ಬೇಗೆಗಳ ತಣ್ಪಿಸುವ ಮಾತು;
ನಂಬಿಕೆಯ ಬಿತ್ತು—ಅಳುವವರ ಬಾಯಿಗೆ ತುತ್ತು—
ತತ್ವ ಸೂತ್ರದಿ ಕೋದ ಮುತ್ತು.

ಎನಿತೆನಿತೊ ರಾಜ್ಯಗಳ ಕೈಯ ಕಡಿವಾಣದಲಿ
ಎಳೆದಾಡಿ ಅಂಕೆಯೊಳಗಿಟ್ಟು;
ಲೋಹ ಕವಚವ ಬಿಟ್ಟು, ಕೀರ್ತಿ ಕವಚವ ತೊಟ್ಟು
ಮತ್ತೆ, ಮಹಿಮೆಯ ತೇಲಬಿಟ್ಟು—
ಪದಕೆ ಮಣಿದರ ಹಣೆಯ ಬೊಮ್ಮ ಬರೆಹವ ತೊಡೆದು
ಹೊಸತು ವಿಧಿಯನು ಮಾಡಿಕೊಟ್ಟು—
ಲೋಕವಿಜಯದ ಸಾಕ್ಷಿ ಮಕುಟವನು ಧರಿಸಿದರು,
ಎದೆಯ ಗೆದ್ದರೆ ಶಾಂತಿಗೊಟ್ಟು ?

# ನಲ್ಮೆ

ಹಳೆಯ ಕತೆಯೊಂದು ಹೇಳುವೆವವರ ಕೂರಸಿಯ
ಹಳಸಿರುವ ಸುದ್ದಿಗಳನೆತ್ತಿ;
ಹರಿದ ರಕ್ತದ ಧಾರೆ—ಕವಿವಾಕ್ಯ ಧಾರೆಯಲಿ
ಸುರಿಯೆ, ಬುದ್ಧಿಗೆ ಮಾಯೆ ಮುತ್ತಿ,

"ಏನು ಸಾಹಸವೇನು ವೀರವಿಲಸಿತವಯ್ಯೊ!"
ಬಾಯುಳಿಯಲಿಂತು ಹಾಡುವೆವು.
ಹಳೆಯ ಪಾಕಕೆ ಬಿರುದಿನೊಗ್ಗರಣೆಹಾಕಿ — ಇದೆ
ಕವಿಪಾಕವೆಂದು ಸವಿಯುವೆವು.

ವಾಣಿಗಿದೆ ಹಲವು ನಾಲಗೆ, ಹಲವು ರಸಗಳಿವೆ,
ಒಂದಲ್ಲವೊಂದೊಂದರೊಳಗು
ಇತಿಹಾಸ ತತ್ವ ವಿಧವಿಧ ಪುರಾಣಗಳೆಂದು
ಹೊಮ್ಮುತಿದೆ ಕವಿತೆಗಳ ಬಿಂದು.

ಕಾಲದಡವಿಯಲಿ ಮಡಿದವರ ಕತೆಗೊರಡಿನಲಿ
ಕಾಂಬುದದೊ ಕೊನರಿಡುವ ಕುಡಿಯು
ಗಾಳಿಯೂದಿದರು, ತನು ಕರಿಕಿದರು, ನಂದದೇ
ಕನಲುತಿರುವಾತ್ಮಗಳ ಕಿಡಿಯು.

ಆರಾದರೇನವರ ಒಳಬಾಳು ಬೇರಿಹುದು—
ಒರೆ ಬೇರೆ, ಒಳಬಾಳು ಬೇರೆ;
ಜೋಡಾಗಿ ಸೇರಿದರೆ ಒಂದಾಗಿ ತೋರುವುದು,
ಅದರಂತೆ ಬಾಳುವೆಯ ಮೋರೆ.

ತನು–ಲೋಕ ವಿಜಯಕ್ಕೆ! ಮನ–ಮೂಕ ಸಂಕಟಕೆ!
ಅಹಹ! ಎಂತಹ ಬೆಸುಗೆಯಿವಕೆ!
ಚಿತ್ತಸಮರದಿ ಗೆದ್ದ—ನಿಮಿಷ ಶಾಂತಿಯ ಮೆದ್ದ
ಗಟ್ಟಿಗನೆ ಅವನರಸು ಜಗಕೆ.

## ಮಾದ್ರಿಯ ಚಿತೆ

ಮಾನವರ ನುಡಿಗಲಿತ ಬಿರುದು ಗುಡುಗುಡಿಸುತಿದೆ
ಲೋಕವಾರ್ತೆಯ ಮೋಹರದಲಿ
ಮೌನಿಗಳ ಮೂಕಹೃದಯಾವೇಶ ಭಾಷೆಗಳು
ಕೆತ್ತಿಹವು ಕಾಡಶಾಂತಿಯಲಿ.

ಅತ್ತವರ ಸತ್ತವರ ಸಾಯದಿಹ ನೆನಹುಗಳು
ಸುತ್ತುವುವು ಬಳ್ಳಿ ಜೊಂಪದಲಿ
ಅಳಲಾಗಿ ನೆಳಲಾಗಿ ಗುಹೆಯ ಪಡಿನುಡಿಯಾಗಿ
ಕಾಣುತಿವೆ ಪ್ರಕೃತಿರೂಪದಲಿ.

ಹಕ್ಕಿ ಕಲಿವುದು ಹಾಡ, ಕಾಡಮರೆಗೊಂಡವರ
ಎದೆದನಿಯ ಬಿಂದುಗಳನೊಟ್ಟಿ.
ಚುಕ್ಕಿಯದೊ ಮಿರುಗುವುದು ವಿರಹ ಯಜ್ಞೇಶ್ವರನ
ನಾಲಗೆಯ ಕೆಂಗಿಡಿಯ ಮುಟ್ಟಿ.

ಜನರ ಕೈ ಗೈಮೆಗಳು ಬಾಳುವುವು ಕಣ್ಮುಂದೆ
ಬರೆದ ಭಿತ್ತಿಯ ಚಿತ್ರದಂತೆ.
ಕಳೆದ ಬಾಳಿನ ಬೇಗೆ—ಕನಸಿನೊಡವೆಯ ತೆರದಿ
ಮಾಯವಾಗಿದೆ ಸೃಷ್ಟಿಯೊಳಗೆ.

ಕಟ್ಟುವೆನು ಕತೆಯೊಂದ ಬನದ ಗವಿಯಿಂದಾಯ್ದು,
ಮರವೆಯಿಂದದನೆತ್ತಿ ಕೊಯ್ದು.
ಎದೆಯನಪ್ಪಲು ಮಣಿಯ ಮಾಲೆಗಟ್ಟುವ ತೆರದಿ
ಅಳಿವಿರದ ನೆನಹಿನಲಿ ಕೋದು.

ಅಚ್ಚರಿದ ಗಂಡು ಹೆಣ್ತನದ ಬೆಸುಗೆಯ ಬೇನೆ
ಹಲವಿಲ್ಲ! ಒಂದೆ ಅನುಭವದ
ಜೀವಿಗಳು ಬೇರೆ—ವೇದನೆಯ ಮಿಡುಕವದೊಂದೆ
ಸುರಿದಿಹುದು ಬಿಡದೆ ಹೃದಯಗಳ.

## ನಲ್ಮೆ

ಸಾಮ್ರಾಜ್ಯ ಚಿಹ್ನೆಗಳ ಸೀಗುರಿಯ ಬೆಳ್ಗೊಡೆಯ
ಬೀಳ್ಕೊಂಡು ಏಕಾಂತದೊಳಗೆ
ಪಾಂಡು ಮಾದ್ರಿಯರ ದಾಂಪತ್ಯ, ವಿರಹಕೆ ಸಂದು
ಕೊಂದು ಕೂಗಿತು ಕಾಡನಡುವೆ.

ತಮ್ಮ ಹೆಸರಿಗೆ ಹೇಸಿ ಒಡೆತನಕೆ ಕೊಕ್ಕರಿಸಿ
ತಮ್ಮಾತ್ಮವೇ ಶತ್ರುವೆನಲು
ಮುಡಿಪುಗಟ್ಟಿದರು ಮುನಿ ಶಾಪಕ್ಕೆ ತಮ್ಮಸುವ;
ನವೆದಿರ್ದರಲ್ಲಿ ಕಾಡಿನೊಳು.

ಅನುಭವವು ಸವಿಯಲ್ಲ—ಅದರ ನೆನಪೇ ಸವಿಯು,
ಅದ ಕದ್ದು ಮೇಯುದೇ ಮನವು?
ಆಗ ಮೂಸೆಯ ಚಿನ್ನದಂತೆ ನೀರಪ್ಪುದೆದೆ
ಕರಗುತಲ್ಲಲ್ಲಿ ಚೆಲ್ಲವುದು.

ಕತ್ತಲೆಯ ಆಳದಲಿ ಗುಯ್ಯೆಂಬ ಗುಳುಗುಳಿಪ
ಬಿಂಜದಲಿ ಪಾಂಡುನೃಪನೊಮ್ಮೆ
ಹಲುಬಿದಾ ನುಡಿಯುದನು ಕೇಳಿ ಕೊಟ್ಟಿತು ಭಾಷೆ
ಕನ್ನಡಕೆ ಮೀಸಲೆಂದೆನಿಸಿ.

### ೨

ಮುನಿಸು ಹೊಗೆ ಸೂಸುವುದೆ ಕಾನನದ ಮೌನದಲಿ?
ಮನವ ದಹಿಸುವ ಮೋಡಿ ದಳ್ಳುರಿವುದೇ?
ಹುಸಿ ಬೆಸುಗೆಯಿಕ್ಕಿಹುದೆ ಎಳಲತೆಯ ಹಾಸದಲಿ?
ಕಟ್ಟು ಬಣ್ಣದ ಬೆಡಗು ಮಿರುಗುತಿಹುದೆ?
ಜೀವನವನುಕ್ಕಿಸುವ ಕೀರ್ತಿ ಮದಿರಾನಂದ
ಕೋಗಿಲೆಯ ಕಲರವವಿ ಹೊಮ್ಮುತಿಹುದೆ?
ಸೃಷ್ಟಿಯಾ ಸೋಗಿಲಿದು; ಶಾಂತಿಯಾ ಬಾಗಿಲಿದು;
ಕವಡಿರದ ಬಾಳುವೆಯ ಹಂದರಿದುವೆ.

## ಮಾದ್ರಿಯ ಚಿತೆ

ಆರಾರ ದೂರು, ಮತ್ತಾರಾರ ನಿಟ್ಟುಸಿರು,
ಆರಾರ ನೀಳ್ದನಿಯ ರೋದನಗಳು;
ಈ ದಡದಿ ವಿಷಮ ವೀಚಿಗಳ ತುಳಿದೆಬ್ಬಿಸವು
ಎದೆಯ ಕೊರೆಯುದು ಕೊಚ್ಚಿ ಹರಿಯುವಳಲು.
ತನ್ನ ದೇಹವೆ ದೋಣಿ, ತನ್ನ ಶಕ್ತಿಯೆ ಹುಟ್ಟು,
ತನಗೆ ತಾನೇ ಕರ್ಣಧಾರನೆನಿಸಿ
ತೇಲುತೇಲುತೆ ನಡೆದು ಎಂತೆಂತೊ ಸೇರುವೆವು
ಸಚ್ಚಿದಾನಂದ ಶಾಂತಿಯ ತೀರದಿ.

ಮಕುಟಧಾರಣವೊಂದೆ ಬಾಳುವೆಯ ತೋರಣವೆ?
ರಾಜದಂಡವನಲೆವುದೊಂದೆ ಬಲವೆ?
ಸೀಗುರಿಯ ತಂಗಾಳಿಯೊಂದೆ ಜೀವನದುಸಿರೆ ?
ಬೆಳ್ಗೊಡೆಯ ನೆಳಲೊಂದೆ ಸೊಗದ ತಂಪೆ ?
ಬಿನ್ನಣವ ಮಾರಿ ಬೆಲೆಗೊಂಬ ಹರದರ ಗಾನ
ಆತ್ಮಕ್ಕೆ ಜತಿಗೊಡುವ ತಾನವೇನೈ ?
'ಜಯ !' ಎಂಬ 'ಜೀ' ಎಂಬ ಬೆಲೆಯಾಳ ಕಲಿತ ನುಡಿ
ಸಗ್ಗದಿಂ ಸಿಡಿವ ಸೊದೆ ತುಂತುರೇನೈ ?

ಅರಸು ಗೆಯ್ಮೆಯ ಭರದಿ ಆತ್ಮತತ್ವವ ತಿಳಿವ
ಪರಿಯ ಮರೆವೆವು, ಮೊರೆದು ಗರ್ಜಿಸುವೆವು.
ರಾಜ್ಯಗಳನೊತ್ತೊತ್ತಿ ಗೆಲ್ಲವರೆ ಮೊಳಗಿಪೆವು,
ಬಗೆಗರಸನಿಹನೆಂಬುದನೆ ಮರೆವೆವು.
ಇಂತು ಗಳಿಸುವ ಬಾಳ ಆಳ್ಕೆಯೆಂಬರೆ ? ಹೇಳ !
ಪಚ್ಚೆ ಹಸುರಿನ ಹೊಲದಿ ಮೇವ ಮಂದೆ
ಒಂದು ಗಳಿಗೆಯ ಮೇವ ತಿಂದು ಮರೆಯದೆ ಸಾವ ?
ಅದರಂತೆ ನಮ್ಮ ಬಾಳ್ ಮರವೆ—ಮಾಯೆ !

# ನಲ್ಮೆ

ತಾನೆ ಕುಡಿಬಿಟ್ಟು ಚಿಗುರಿಟ್ಟು ಅರಲಾಗಿ ಮಿಡಿ
ಯಾಗಿ ಬಿಸಿಲುಂಡು ಕೆಂಪಾಗಿ ಬೀಗಿ,
ತೂಗಿ ತೆಂಬೆಲರಿಂದ ನಸುಜಗುಳಿ ತೊಟ್ಟಿಂದ
ಜಾರಿ ಬೀಳುವ ಹಣ್ಣಿನಂತೆ ಮಾಗಿ,
ಜೀವವಿದು ತನ್ನೊಳಗೆ ತನ್ನ ಮೌನವನುಂಡು
ತೀವಿ ರಸದಲಿ ಬಣ್ಣವೇರಿ ಮೀರಿ,
ತನ್ನ ನೆಲೆಯನು ಕಂಡು ಸೇರಲದುವೇ ಬದುಕು;
ಹಲವುದೋಹಳದಿಂದಲಾವ ಸೊಗಸು?

ಬೆದರುವೆನು ಹುಸಿನಗೆಗೆ—ನಾಚುವೆನು ಘೋಷಣೆಗೆ,
ಕೊಳ್ಕಿದಿವೆ ರಾಜತೆಯ ಬಲಕೆ ಚಲಕೆ
ಆಳೆಂಬ ಅರಸೆಂಬ ಭೇದದಿಂ ಗರ್ಜಿಸುವ
ಜಂತು ಜೀವನ ಬೇಡ ಜಗದ ಸೊಗಕೆ.
ಇಲ್ಲಿ ಹುಸಿಬೆಡಗಿಲ್ಲ—ವಂದಿಗಳ ಮೊರೆಯಿಲ್ಲ—
ಘನಮಾರ್ಗದಿಂ ಬಿದ್ದ ತುಂತುರಂತೆ
ಸೃಷ್ಟಿದೇವಿಯ ಮುಡಿಲೊಳಿಷ್ಟಸುಖಗಳ ಪಡೆದು
ಬಿದ್ದೆಡೆಯೊಳಾರಿಕಣ್ಮರೆಯಪ್ಪೆವು.

ಈ ಕಾಡು ನಾಡಿನಿಂ ಹಲವುಪಡಿ ಮಿಗಿಲೆನಗೆ;
ಗುಳುಗುಳಿಪ ನಿರ್ಝರವೆ ನನ್ನ ವಂದಿ.
ಜೀವ ಭೇದವ ಹುಡುಕದೊಂದೆ ನೆಳಲಿನೊಳಿಡುವ
ಎನ್ನ ಬೆಳ್ಗೊಡೆಯು ಆಗಸದ ಪರಿಧಿ.
ಮಾಮರದ ಜನ್ಮದಲಿ ಕೆಂಪೇರುತಿಹ ಕೊನರೆ
ಜಸವನುಗ್ಗಡಿಸುತಿಹ ವಿಜಯಕೇತು.
ಆನಂದ ಸಾಮ್ರಾಜ್ಯ; ನಾನೋರ್ವನೇ ರಾಜ;
ಮೃಗಗಳೇ ಪಕ್ಷಿಗಳೆ ಎನ್ನ ಜನರು.

## ಮಾದ್ರಿಯ ಚಿತೆ

ಒಮ್ಮೊಮ್ಮೆ ಬಳ್ಳಿಮಾಡದೊಳೆ ಒಡ್ಡೋಲಗವು;
ಅಳಿಗಳಾ ಕೋಗಿಲೆಯ ಗೀತವೊಮ್ಮೆ.
ಮುಗುಳುಗಳ ಕುಸುಮಗಳ ಕಪ್ಪಕಾಣಿಕೆಯೊಮ್ಮೆ;
ಚಿಗುರುಗಳ ಕವಲುಗಳ ಕೇಲಿಯೊಮ್ಮೆ.
ಒಮ್ಮೊಮ್ಮೆ ಮಧುರ ಮಾಸಗಳ ಮೃದುಲಾಸ್ಯಗಳು;
ಮಳೆಯ ಗಾಳಿಯ ತಾಂಡವಂಗಳೊಮ್ಮೆ
ಆವುದಿದೆ ತಪ್ಪು ? ಇನ್ನಾವ ಸಾವಿನ ಮುಪ್ಪು ?
ಈ ಕಾಡೆ ಸ್ವರ್ಗನಂದನವಲ್ಲವೆ ?

* * * * *

ಒಂದೆಣಿಕೆ ಗಡಿಯಿಂದಲತ್ತ ವೈರಾಗ್ಯವದು
ಧರಣಿಯಲಿ ಬೇರೂರಿ ಮಡಲಿಟ್ಟಿದೆ;
ಪರಲೋಕದತ್ತ; ಬೇರೊಂದೆಡೆಯೊಳದೊ ಇಹದ
ಭವದ ಭಾವದ ಬಯಕೆ ಕವಲಿಟ್ಟಿದೆ.
ಬಗೆ ಬಗೆಯ ಮುಗುಳು ಗೊಂಚಲಿನ ಹೂಜಲ್ಲಿಗಳ
ಕಣಿಗೊಟ್ಟು ಮನವ ಮೋಹರಿಸುತ್ತಿದೆ;
ವಿರಹಿಗಳ ಮರುಳು ಮಾಡುವ ಕೊಂದು ಕೂಗುವಾ
ಸಮರ ಸನ್ನಾಹವಲ್ಲವೆ ಸೃಷ್ಟಿಗೆ ?

ಬರುತಿಹುದು ಬರುತಿಹುದು ಸಂಸಾರಸಾರಗಳ
ಮುಸಗಿ ಹೀರಿದ ನೆನಪು ಸುಖದ ನೆನಪು,
ಅನುಭವದಿ ಮುಸೆಮುಸೆದು ಥಳಥಳಿಸುವಾ ನೆನಪು,
ಜೀವಗೊಲೆ ಮಾಡಲೇಕಡಿವ ನೆನಪು.
ಎಲ್ಲಿ ಸಂಸಾರ ! ಸಂಸಾರವಲ್ಲಿಯು ಬೇರು !
ಕುಸುಮ ಕೋಮಲೆಯುಸಿಯನಳಿವತೋಳು ?
ಎಲ್ಲಿ ಬೇಟದ ಬಿತ್ತು ! ಸವಿಯ ನಲ್ಮೆಯ ತುತ್ತು !
ಎಲ್ಲಿ ನಲ್ಮೆಯ ತುಟಿಯ ಕೋದ ಮುತ್ತು ?

## ನಲ್ಮೆ

ಜೀವವೊಂದೊಡೆದೆರಡು ಕವಲಾದ ನಂದನರ
ಪಲ್ಲವಾಧರದರಲುನಗೆಯುದೆಲ್ಲಿ ?
ಎಲ್ಲಿ ಬಾಗಿದ ಮೊಗದ ಹೊಡಕರಿಪ ಹುಬ್ಬಿನಲಿ
ಕೆಚ್ಚುಗೊಂಡಾ ನೋಟ—ಮಿಂಚು ಬಳ್ಳಿ ?
ತುಂಬು ಜವ್ವನದಿ ತುಂಬಿದ ನುಡಿಯ ಸಿಂಗರದ
ಕೆಂಬಿಸಿಲ ಕೆತ್ತನೆಯು ಹಾಸವೆಲ್ಲಿ ?
ವಿರಹದಲಿ ದೊರಕುವುದೆ ಕಾಡಿನಲಿ ಕಾಣಿಪುದೆ ?
ಎನ್ನರಿಯುಳಿವ ಸರಸದೊಳಲ್ಲದೆ ?

ಕಿಡೆ ನುಡಿಯಲೀ ಕವಿ ! ಅಲಂಕಾರಗಳ ಹೊಸೆದು
ನುಡಿಯ ಮೋಹಕೆ ನಿಜವ ಮರಸು ಮಾಸು !
ಜರಿಯೆಲೇ ತಾತ್ವಿಕನೆ ! ಮೋಡಗಳ ಮೇಲೇರಿ
ಜಡತೆಯಲಿ ಬೀಳ್ನುಡಿಯ ಮಳೆಗರೆಯಿಸು.
ಭವವೆ ಸಾಗರವಿರಲಿ ! ತೆರೆ ಮುಸಗಿ ಗರ್ಜಿಸಲಿ !
ಜೀವನದ ಕಾನನದ ತೊರೆ ಹರಿಯಲಿ !
ಆವ ನಿಂದೆಗಳಿರಲಿ ! ಆವ ಬಂಧಗಳಿರಲಿ !
ಕಷ್ಟವೇ ಸಂಸಾರ ? ಅದುವೆ ಬರಲಿ !

ಗಳಹುವರ ದೂಷಣೆಗೆ ಬೆದರಿಯೆದೆನೆರಿಯುವರ
ಉಳಿದು ಜಾರುವ ಜನರೆ ! ಜಾರಿರತ್ತ !!
ನೋಯಲಿದೆ, ನವೆಯಲಿದೆ, ಸಂಕಟದಿ ಸವೆಯಲಿದೆ,
ಎಂದು ದೂರುವ ಜನರೆ ! ತೊಲಗಿರತ್ತ !
ನಿಮಗಲ್ಲ ಸಂಸಾರ ! ನಿಮಗಲ್ಲ ಸುಖಸಾರ !
ನಿಮಗೆ ಕಗ್ಗತ್ತಲೆಯ ಗೂಡು ಕಾಡು.
ದುಗುಡವನು ಸುಖದ ಪಾಕದಲೆರೆದು ಸವಿಯುತಿಹ
ರಸಿಕರಿಗೆ ಬಾಳು, ಬಾಳುವೆಯ ಪಾಡು.

# ಮಾದ್ರಿಯ ಚಿತೆ

ಸುಗ್ಗಿ ಕುಣಿಯುತ ಬಂತು—ಬಗ್ಗಿ ಮಾಮರ ನಿಂತು
ಹಿಗ್ಗುತಿದೆ ಕಮ್ಮಲರ ಮುಕುಟವಾಂತು.
ನೋಡಲಾಗದೆ? ತುಂಬಿ ಗಾನರಸದಿಂ ತುಂಬಿ
ನಾಡಿಗೋಕುಳಿ ಮಾಡುತಿರುವುದಿಂತು.
ಚಿತೆಯ ಬೂದಿಯ ಕೆಂಡದೊಳಗು ಪ್ರೇಮದಖಂಡ
ಸೌಂದರ್ಯವೇ ಕಿಡಿಯ ಸೂಸುತಿಹುದು.
ಮುಗ್ಗಿ ಮುದುರಿತು ಮಾಗಿ ಚೈತನ್ಯವನು ನೀಗಿ
ಹೊಸತನದ ಋತುವಿನಲಿ ಮರೆಯಾದುದು.

ತರಗೆಲೆಯ ಮೆಯ್ಯಾಂತು—ಚಳಿ ಗಾಳಿಯುಸಿರಾಂತು
ಹಿಮದ ತುಂತುರ ನೆತ್ತರಾಂತು ನೋಂತು,
ಹಲಗಾಲದಿಂ ನೊಂದ ಶಿಶಿರ ಮರವೆಗೆ ಸಂದ
ಬರುವನು ವಸಂತ ಮಾಧವಿಯ ಕಾಂತ.
ಇನ್ನೆಲ್ಲಿ ವೇದಾಂತ! ಇನ್ನೆಲ್ಲಿ ಬೋಧಾಂತ!
ಇನ್ನೆಲ್ಲಿ ಮುನಿಯ ಮೌನದ ಸಾಧನೆ!
ಪ್ರೇಮ ವಿಜಯದ ಸಿಂಹನಾದವನು ಮಾಡುತ್ತ
ಕುಕಿಲುತಿಹ ಕೋಗಿಲೆಯದೋ ಕಾಣದೆ?

ಸೃಷ್ಟಿಯಿಂತುತ್ಸವದ ಗೊಟ್ಟಿಗುಣಿತದೊಳಿರಲು
ಎನ್ನ ಜೀವನವೊಂದು ಮೌನವಾಂತು
ಕಾಡ ಮೂಕತೆಗೊಂಡು, ಗವಿಯ ಕತ್ತಲೆಯುಂಡು,
ಆವ ತಾಳಕೆ ಮೇಳಕೊದವದಾಯ್ತು.
ಮನಕೆ ಕೊರಲಗಿಟ್ಟು, ಹೊಡೆವಳಲ ಗಾಯಕ್ಕೆ
ಎನ್ನ ಮುಗುದೆಯು ಸವಿಯ ತುಟಿಯ ಮದ್ದು.
ಅದುವೆ ದೊರಕದು ನನಗೆ! ದೊರಕಿದರು ನಂಜದುವೆ!
ಅಹಹ ವಿಧಿಯೇ! ನಂದುತಿಹ ಜೀವಿಗೆ.

# ನಲ್ಮೆ

ಮಾತು ಮರೆತಗೆ—ಪ್ರೇಮವೇನು? ತಿಳಿಯದ ಪಶುಗೆ
ಪ್ರೀತಿಗಳ ಸಂಕಟಕೆ ಹೆದರಿ ಮುದುರಿ,
ಆತು ತರಗೆಲೆಯು, ಕಿತ್ತಡಿಯು ವೇಷವ ತಳೆಯು–
ವಾತಗೇ ಕಾಡು ಸಿರಿಮನೆಯಪ್ಪುದು.
ಆರ ಬಗೆ ಹಣತಿಗೆಯೊಳಾಗಾಗ ಊರ್ಮಿ ಕುಡಿ
ಹೂವಿನಂತರಳುವುದು ಗರಿಕುತಿಹುದು,
ಕಿಡಿಗೆದರಿ ಹಾರುವುದು, ಹಾರಿ ಹೊಗೆ ಕಾರುವುದು,
ಪ್ರೇಮ ಪೂಜಕಗೆ ಕಾಡಾವ ಸೊಗಸು?

ಅಲ್ಲಲ್ಲಿ ಕುಪ್ಪಳಿಸಿ ಚೀರಿ ಹಾರ್ವುದು ಹಕ್ಕಿ
ಹೊದರಹದರಿಂ ಲಲ್ಲೆ ನುಡಿಯ ಕೇಳಿ;
ಹಸುರು ಹಸಲೆಯ ಮೇಯುತಿದೆ ಮಂದೆ ನಲವಿಂದೆ
ಆವುದೋ ಸವಿಯ ಕಂಡಾ ಹುಲ್ಲಲಿ.
ಪ್ರಣಯ ಮುಗ್ಧನದೋರ್ವ ಮುಗುಳ ತೊಡವುಗಳಿಟ್ಟು
ಬಳ್ಳಿಹೆಣ್ಣಿನ ಮನವ ಸುಲಿಯುತಿಹನು.
ಪೆರನೋರ್ವನೆನ್ನಂತೆ ಮುಗಿಲ ಮರೆಯಲಿ ನಿಂತು
ಹಿಮಕಣದಿ ತನ್ನೆದೆಯ ಕರಗಿಸುವನು.

ಮೆಯ್ಗೊಂಡ ಯೌವನಕೆ ಮುಪ್ಪೊಂದೆ ಸಿರಿ ಮುಡಿಯೆ?
ನಲ್ಲೆಯಳ ಕೂಟವದು ಹಗಲ ಕನಸೆ?
ಇನಿಯರಪ್ಪಿಗೆ ಹುರುಡುಗೊಂಬುದುಂಟೇ ದೈವ?
ಕರುಬುವಾ ದೈವಕಿನ್ನಾವ ಪೂಜೆ?
ಮುನಿಗೆ ಮುನಿಸುಂಟೆ? ಮುನಿಹರಿಣ ವೇಷವ ಧರಿಸಿ
ವಿಷಯಗಳೊಳೋಲಾಡಿ ತಿರಿವನೆನಲು
ಸಿರಿಯಾಳ ಸೊಗದಾಳ ಮೋಹಕಿನ್ನೆನಿತಾಳ?
ಅದನೆ ವಿಧಿ ಗುರಿಮಾಡಿ ಹೊಡೆಯಬಹುದೆ?

## ಮಾದ್ರಿಯ ಚಿತೆ

ಅಂದು ಚೈತ್ರಾನಿಲನ ಬೆಂಬಳಿಯು ಸಂದಾನು
ಕಾಡೊಳಲೆದಾಡಿದೆನು ಬೇಟೆಯೆಂದು.
ಬಳ್ಳಿಬಳ್ಳಿಯಲಿ ತರುತರುಗಳಲಿ ಕೆಂದಳಿರ
ಗೂಡಾರಗಳ ಕಟ್ಟಿ ದಾಳಿಗೊಂಡು,
ನನೆಕೊನೆಯ ಮೊನೆಮಾಡಿ ಮಸಗುತಿರೆ ಮನ್ಮಥನು
ಹೃದಯವೆತ್ತೆತ್ತಲೋ ಹಾರಿ ಚೀರೆ,
ಹೆದೆಯೇರಿಸಿದೆ ಬೇಟೆಗೆಂದು, ಬೇಟವ ಕೊಂದು
ಸುಖಕೆಲ್ಲ ಕೊನೆಯಿರದ ಹೊಲೆಮಾಡಿದೆ.

ತವಸಿಯೋರ್ವನು ಕಾಡಬೆಳ್ಳಿರಲೆಯಂದದಲಿ
ವೇಷವನು ಪಲ್ಲಟಿಸಿ, ಮುಗುದತನದ
ಹುಸಿಮುಸುಕ ಧರಿಸುತ್ತ, ನಲ್ಲೆಯೊಡಗೂಡಿದನು
ಬಳ್ಳಿಮಾಡದ ಹೊದರೊಳೊಂದಿ ಮರೆಯ.
ಅಕಟಕಟ! ಎನ್ನ ವಿಧಿ ಕೊಡಲೆನಗೆ ಕೆಡುಗಣ್ಣ–
ನಿಜವ ಮರಸುವ ಕುರುಡುಗಣ್ಣನಂದು
ಕಾಳಕೂಟದ ಕೊಡವನೊಡೆದು ಮೆಯ್ಯುಡಿಪಂತೆ
ಎಸೆದು ಕೂರಲಗ ಶಾಪವಕೊಂಡೆನು.

ಎನಿತು ಬಾಣದ ಕೊಬ್ಬು? ಅರಸುಗೈಮೆಯ ಜಬ್ಬು?
ಧರಣಿಯರಸಾಳಿಕೆಗೆ ಸೊರೆಹೋಯ್ತು?
ಜಡದೇಹವರಸನಾಳಿಕೆಗೆ—ಅಂತಃಕರಣ
ಒಡೆಯನಾಳಿಕೆಗೆ ಬಾಳಿಕೆಗಲ್ಲವೆ?
ಅಧಿಕಾರ ಸುರೆಯು ಕುಡಿಯುದ ಮುಗ್ಧ ಜೀವಿಗಳ
ಮೃಗವಾಗಿ ಮೆರೆಯಿಪನು ಪಡೆದ ತಂದೆ.
ಬನದೊಳಗು ವಿಜಯ ಲೋಭವೆ? ಮೃತ್ಯುಕೇಲಿಗಳೆ?
ಆರು ತಲೆ ಹೊಣೆಯೆಂದು ಬಾಣವೆಸೆದೆ?

## ನಲ್ಮೆ

ಹುಲ್ಲ ಮೇಯುವುದೊಂದು, ಹಾಡಿ ನಲಿಯುವುದೊಂದು
ತನ್ನ ನುಡಿಯೊಳೆ ತೊಂಡುಗೆಡೆವುದೊಂದು;
ಸೃಷ್ಟಿಸೌಂದರ್ಯಕ್ಕೆ ಗರಿಗೆದರಿ ಕೊಡೆ ಹಿಡಿದು
ವಿಧಿಯ ಹೆಮ್ಮೆಗೆ ಮಕುಟವಿಡುವುದೊಂದು;
ಪರಿಪರಿಯ ರೂಪದಲಿ ಮೆರೆವ ಮೃಗ ಹಕ್ಕಿಗಳ
ಹೃದಯಾಂತರಾಳದಾನಂದವೊಂದೆ
ಅಲ್ಲಿ ಮಿನುಗುವ ಸೊಡರ ಕಿಡಿಯೊಂದೆ, ಕುಡಿಯೊಂದೆ,
ಎಂದು ತಿಳಿದರೆ ನರರ ಬಾಳ್ಗೆ ಕುಂದೆ?

ಒಡಲು ಬೇರಾಗಲಿನ್ನದರಳತೆ ಬೇರಾಗೆ
ಅದರೊಪ್ಪ ಬೇರಾಗಿ ಮಿರುಗಲೇನು?
ಸುಖವ ದುಃಖವ ಹಿಡಿವ ಹೃದಯ ಯಂತ್ರವದೊಂದೆ
ಅದರೊಳಗಣಿಂದೇಳ್ವ ನಾದವೊಂದೆ.
ಒಂದೆ ಅಚ್ಚಿನ ಜೀವ—ಹಲವು ರೂಪದ ಕಾಯ
ಬಿಸುವ ಕರ್ಮದ ರಚನೆಯೆಲ್ಲವೊಂದೆ.
ವಿಷಯ ವಿಷಯದಿ ಸುತ್ತಿಸುವ ಮನೋರಥವೇಗ
ಹಿರಿಯ ಜನ್ಮಕು ಕಿರಿಯ ಜನ್ಮಕೊಂದೆ.

ವೇದ ವೇದಾಂತಗಳ ಹೀರಿ ಬಳೆಯುವುದಾತ್ಮ;
ಇಹದಾಸೆಯನು ಮೇದು ತಿಂಬುದೊಡಲು.
ಎರಡಕೊಂದೇ ತುತ್ತ ಕೊಡುವ ನಿಶ್ಚಲಚಿತ್ತ
ಮನಕೆ ಬಳಿವಳಿಯಾಗಿ ಬಹುದೆ? ಹೇಳು.
ಪರದ ಸಾಧನೆಗೆ ತಲೆದೆತ್ತ ಮುನಿಯಾದರೂ
ಉರಿವ ವಿಷಯದ ಕೊಂಡದೊಳಗೆ ಬಿದ್ದು
ಸೀತುಹೋಗುವನು, ಗರಿಸುಟ್ಟು ಸಿಡಿಮಿಡಿಗೊಂಡು
ಕೊರಗುವನು ಮತ್ತದುವೆ ದುಗುಡವೆಂದು.

## ಮಾದ್ರಿಯ ಚಿತೆ

ಆಸೆಗಾವುದು ಮರ್ದು? ಅದರ ತೀರ್ಕೆಯ ಹೊರತು
ತೀರದಾಸೆಯ ಭೂತ ಹಲವು ಭವದಿ
ಜೀವಗಳ ಬೆಂಬತ್ತಿ ಕರ್ಮದಲಿಕುಣಿಯಿಪುದು;
ಅದಕೆ ಮುನಿಯಾದರೂ ಬೆದರಬೇಕು.
ಅಯ್ಯಯ್ಯೊ! ಆಸೆ ಬಾಳ್ಗೊಲೆಗೆಯ್ದೆಯಲ ನೀನು!
ಸಂಸೃತಿಯ ಸವಿಯ ಕಹಿಯೆಂದು ಬಿಟ್ಟು
ತಾನೆಂದೊ ತೀರುತಿರ್ದುದು ಜೀವ! ಅದನಿಂತು
ಕೆಡೆಯಿಸಿದೆ ಅಳಿಯಾಸೆಗಳ ನೆಳಲಲಿ.

ಕನಲು ಕೆಂಡಕೆ ನೀರ ಹೊಯ್ಯಲದರುಮ್ಮಳವು
ಎನಿತೆಂದು ಬಲ್ಲೆವೇ? ಜ್ವಲಿಸುತಿರುವ
ಪ್ರಣಯವನು ಹೊಡೆದು ನಂದಿಸುವೆನೆಂದೀ ಕೊಲೆಗೆ
ಮನವ ಮಾಡಿದ ಧೂರ್ತ! ಇದರನುಭವ
ಬಾರದಿರುವುದೆ ನಿನಗೆ? ಇಲ್ಲದಿರೆ ದೊರೆವುದದೊ
ನೀನೆ ಈ ವೇದನೆಗೆ ಸಿಲುಕಿ ಸುತ್ತಿ
ಜಾನವಿಲ್ಲದೆ ಕೂಡುವಂದು ನಲ್ಲೆಯ ಮುತ್ತೆ
ಬೆಳೆಯಿಪುದು ನಿನ್ನಳಿವನುತ್ತುಬಿತ್ತಿ.

ಬೇಗೆಯಲಿ ಬೆಂದು ಕುದಿ ಕುದಿಯುತಿಹ ಬೇಟವಿದು
ಹೊಗೆವುದಿದೊ ನಿನ್ನ ಚಿತೆಯಗ್ನಿಯಂತೆ.
ಮಾಗಿದಾವರೆಯಂತೆ ಕೊರಗಿದೆನ್ನಯ ಭಾಷೆ.
ಒದರುತಿದೆ ಮಸಣದಾ ಮಂತ್ರದಂತೆ.
ಎನ್ನ ನೀರೆಯ ತುಟಿಯ ಬಾಡಿಬಿದ್ದಾ ಮುತ್ತು
ನಿನ್ನ ಅಸುಹೀರ್ವ ಮೃತ್ಯುವಿನ ಬಿತ್ತು.
ಮೃತ್ಯುವಿನ ಮುಂದೆ ಆಳೆಂದು ಅರಸೆಂದಿದೆಯ?
ನಿನ್ನ ಬಾಳುವೆಯಾತಗೊಂದೆ ತುತ್ತು.

## ನಲ್ಮೆ

ಬರುವ ಸೊಗಗಳೆ ಬರವ ತರುವ ಸುಗ್ಗಿಯು ಬರವ
ಬರಿದೆ ಹಾರೈಸುವರೆ ವಿರಹಿಜನರು?
ಎಂದೆಂದೊ ಕೂಡಿ ಅಗಲಿದ ನೆನಹು ಅವರೆದೆಯ
ತಂದು ಕೂಡಿಪುದು ರಸಕೇಲಿಗಳೊಳು.
ಅವರ ಬೇಟೆಗೆ ಬಂದು ಕೊಂದು ಕೊಲೆಮಾಳ್ಪವಗೆ
ಮುನಿಯದೇ ಧರೆಯು ಸೌಭಾಗ್ಯವೆಲ್ಲ?
ಹಿಮದ ರಾಶಿಯು ವಿಭವ— ನಿನ್ನರಾಜ್ಯದ ವಿಭವ
ಕರಗದೇ ಅಳಲ ಬೆಂಕಿಯು ಸನಿಹದೆ?

ಸುಗ್ಗಿ ಮೊರೆಮೊರೆವಂದು ತುಂಬಿ ಜೇಂಕರಿಪಂದು
ಮೊಗ್ಗೆಯದು ಬಿರಿದೆದೆಯ ಬಿಚ್ಚುವಂದು,
ಹಿಗ್ಗಿ ಕೋಗಿಲೆ ಹಾಡಿ ಕಾದಲರ ಕರೆವಂದು,
ಬುಗ್ಗೆ ಬುಗ್ಗೆಯಲಿ ರಸವೊಸರುವಂದು,
ನಲ್ಲೆಯರ ತೋಳ್ಗಳೇ ಶರಣೆಂದು ಜನರೆಲ್ಲ
ಅಲ್ಲಲ್ಲಿ ಹಂಬಲಿಸಿ ಸಂಭ್ರಮಿಸಲು
ಎಲ್ಲಾದರೂ ನಲ್ಲೆ ಸವಿದುಟಿಯು ಹೀರಿದರೆ
ಕಲ್ಲಾಗಿ ಬೀಳ್ವೆ ಮೃತ್ಯುವ ಪದದೊಳು.

ಆದರೇನರಸೊಂದು ಕಾಡಗವಿಯಲಿ ಮನೆಯ
ಎಂತಾದರೂ ಪೊರೆಯೊ ನಿನ್ನ ಬಾಳ.
ವಿಧಿ ಕೊಟ್ಟ ಹರೆಯಕ್ಕೆ ಅಡ್ಡಬಂತೆನ್ನವಿಧಿ
ಮುನಿಯ ಶಾಪದಿ ಕಂಡರುಂಟೆ ತೊದಲ?
ಪುಣ್ಯ ಜೀವಿಗಳ ಹೊರೆಯುವ ಕೆಲಸ ದೇವರಿಗೆ—
ಪಾಪಿ ಜೀವನ ಜವನಕಾಲ ಮೆಟ್ಟು.
ಅಯ್ಯಯ್ಯೊ! ಅವನ ತುಳಿತಕೆ ಕೊರಲನೊಪ್ಪಿಸುತ
ಸಾಯುದಂದದಿ ಬನದಿ ತಲೆಯ ಮರಸು.

*    *    *    *    *

ಮುನಿ ಶಾಪವಿಂತು ಬಾಳುವೆಯ ಕತ್ತಲಿಸಿದುದು.
ಮುಪ್ಪಿನಸಲಿ ಗುಹೆಯೊಳಗೆ ನವೆಯಬೇಕೆ?
ಹೆರರಿಂತು ತಮ್ಮ ವೈಭವವ ಭಂಡಾರಗಳ
ಕಾವರಂತಾನು ತಲೆಗಾಯಬೇಕೇ?
ಪರರ ಸುಖಗಳ ಲೀಲೆಗಳನು ಕಂಡೆದೆತಿದಿಯ
ಒತ್ತಿ ಬಿಸಿಯುಸಿರ ಸುಮ್ಮನೆ ಸೂಸಲೆ?
ಬದುಕಿನೊಂದೇ ಆಸೆ—ಬೇರಾವ ಬಯಕೆಯಿದೆ?
ಮುಪ್ಪು ಸಾವುಗಳೇಕೆ ಬಾರವಿಂದೆ?

ಎನ್ನ ದೇವರ ಗುಡಿಗೆ ನಂದಿದಾಸೆಯ ದೀಪ;
ನಿಟ್ಟುಸಿರ ಮಂತ್ರ; ಉಮ್ಮಳದ ತಂತ್ರ;
ಕೈ ಮುಗಿದು ಕರೆದರೂ ಬಾರದಿಹ ಸೌಖ್ಯಗಳ
ನೆನಪದುವೆ ಮೀಸಲಾಗಿಟ್ಟ ಕುಸುಮ;
ಮೌನದಲಿ ಜಾನ, ಕಣ್ಣೀರಿನೊಂದಭಿಷೇಕ;
ಹೊಗೆವೆದೆಯ ಕರ್ಪೂರದಾರತಿಗಳು;
ವೇದ ತತ್ವಗಳ ನಿರ್ಮಾಲ್ಯ—ಉಳಿ ಬಾಳುವೆಯು
ಒಂದೆ ಮೃತ್ಯುವ ಮೂರ್ತಿ ಪೂಜೆಯಹುದು.

೩

ಶತಶೃಂಗ ಪರ್ವತದ ತಪ್ಪಲಿನ ವನಗಳಲಿ,
ಹುಲ್ಲಿ ಕಡವೆಗಳ ನಿಷ್ಕಲ್ಮಷದ ಮೇಲನದಿ,
ಹರಿವ ನಿರ್ಝರದ ನಿರ್ಮಲ ಜಲ ಸ್ನಾನದಲಿ,
ಹಣ್ಣು ಕಾಯ್ಗಳ ಬೇರುಗಳ ಮಧುರ ಭೋಜನದಿ,
ಕಾಲವನು ಕಳೆಯುತಿರ್ದನು ಪಾಂಡು ಭೂಪಾಲ.
ನಗುವನಾದರೆ ನಗೆಗೆ ಗೆಲವಿಲ್ಲ; ಕಂಬನಿಯ
ಸುರಿವನಾದರೆ ಸರಿಗೆ ಕೊನೆಯಿಲ್ಲ; ಗೆಳೆತನವ
ಬಯಸುವನೆ? ಕಾಡಿನಲಿ ಮೊಳೆವ ಗೆಳತನವಿಲ್ಲ.

ಮಕ್ಕಳೈವರು, ಸತಿಯರೀರ್ವರಾ ಬನದಲ್ಲಿ
ಬೆನ್ನು ಬೆನ್ನೊಳೆ ಬಂದು ಬಳಿಯೊಳೇ ನಿಲ್ಲುವರು;
ಪರ್ಣಶಾಲೆಯನೆ ಅರಮನೆಯೆಂದು ಭಾವಿಪರು;
ತಮ್ಮರಸನೆಡೆಯೆ ಸುಕ್ಷೇತ್ರವೆಂದೆಣಿಸುವರು;
ದೂರದಿಂ ನೋಡಿ ಮೌನದೊಳೆ ವಂದಿಸುತಿಹರು;
ಕಣ್ಣೀರ ಹನಿಯೊಳೇ ನಲ್ಮೆಯನು ತುಂಬಿಹರು;
ಒಡನಾಡೆ ಮಾತಾಡೆ ನೋಂಪಿ ಕೆಡುವುದೆನುತ್ತೆ
ಕಣ್ಣಬೊಂಬೆಯೊಳವನ ಸೆರೆಹಿಡಿದು ಕೂಡುವರು.

ಶಾಪವಿಂತಿಹುದೆಂದು, ಅದರರ್ಥವಿಂತೆಂದು,
ನಾಟಿಸಲು ಬಹುದು ಹೆರವರ ಮನಕೆ; ಪಾಂಡುವಿನ
ಆತ್ಮಾಂಕುರಗಳಂತೆ ಮೂಡಿರುವ ಸವಿತೊದಲ
ಬಾಲಕರಿಗಾವರ್ಥಮಾಡಿ ಕಲಿಸಲು ಬಹುದು ?
ನಾಲಗೆಯೊಳಿನ್ನು ವಾಣಿಯು ಪದವನಿಟ್ಟಿಲ್ಲ;
ಎದೆಯಿನ್ನು ಎಸಳೆತ್ತಿ ಕಂಪುಗಳ ಬಿಡಲಿಲ್ಲ;
ಮೆಯ್ಗೆ ಅನುಭವದಕೋಡುವ ಗಾಳಿ ಸೋಕದಿದೆ.
ಸಂತಸದ ಬುಗ್ಗೆ ನಗೆಯೊಳಗೆ ಗುಳುಗುಳಿಸುತಿದೆ.

'ಅಪ್ಪಯ್ಯ ಕೋಪಿಸುತೆ ವನಕೆ ಬಂದನೆ ?' ಎಂದು,
'ಅಮ್ಮಗಳಿರಾ ! ಏಕೆ ಕರೆದು ಬರಲಿಲ್ಲೆ'ಂದು,
'ಎಂದು ಹಸ್ತಿನಪುರಕೆ ಹೋಗುವೆವು ನಾವೆಂ'ದು,
'ಅಯ್ಯಯ್ಯೊ ಮರುಳೆ ! ಇನಿತಕೆ ಕಂಬನಿಯೆ ?' ಎಂದು,
'ನುಡಿವುದಿಲ್ಲೀ ಮಾತ; ಕಾಡಿನೊಳೆ ಜೀವಿಸಲಿ !
ಕಾಡುಮಿಗಗಳ ಕೂಟವಾವುದಾದರು ಬರಲಿ !
ನೀವತ್ತು ಮನಕೆ ಕತ್ತಲೆಯ ಕವಿಸಲು ಬೇಡ !'
ಎಂಬ ಮಕ್ಕಳ ತೊದಲೆ ಕದಲಿಪುದು ಅವರೆದೆಯ.

## ಮಾದ್ರಿಯ ಚಿತೆ

ಪಾಂಡುರಾಜನೊ! ಪುರುಷ ಜನ್ಮಿಯಲ್ಲವೆ? ಎಂತೊ
ಇಂದ್ರಿಯವ ಬಿಗಿದು, ಧಾರಿಣಿಗೆ ತನಗಿಹ ಬಂಧ
ಎಂದೋ ಹರಿದುದೆಂದು. ನಲ್ಲೆಯರ ನೋಟದಲಿ
ಬಂದೇ ಬರುವುದೆಂದು ಸುಖದ ಸಂಸ್ಮರಣೆ, ಮುನಿ
ಯೆಂದ ನುಡಿಯೋ ಪ್ರಲಯ ಭೈರವನ ದನಿಯೆಂದು
ಕೊಂದೇ ಕೊಲುವುದೆಂದು, ಬೆದಬೆದರಿ ಮುದುಮುದುರಿ
ಜೀವವನೆ ಜಗ್ಗಿಸುತ, ಭಾವವನೆ ಕುಗ್ಗಿಸುತ,
ಸವೆಯುತಿರ್ದನು ತನುವ ನಿಸ್ಸಂಗನಾಗಿರುತ.

ಬೇರೆ ಬಗೆ ಮಾದ್ರಿಯದು—ಕಷ್ಟರಾಶಿಯ ಹೊತ್ತು
ಬಾಳಲೆಂದೇ ಪಳಗಿ ಬಂದ ಹೆಣ್ಣಲ್ಲವೇ?
ಕಾರಿರುಳೊಳಗು ಕಣ್ಣು ಬಿಟ್ಟು ನಡೆವರ ದಿಟ್ಟಿ
ಮೇಲೆ ಬರಬರುತ ನಸುಬೆಳಕ ಕಾಣುವ ತೆರದಿ,
ಅಡವಿ ಬಾಳ್ವೆಯ ದುಗುಡದೊಳಗು ನಸುಸಂತಸವ
ಒಡಗೂಡಿಕೊಂಡಿರಲು, ಶಾಂತಿಯನು ಬಯಸುತ್ತ
ರವಿಕಿರಣಹೊಗದಿರುವ ಗುಯ್ಯೆಂಬ ಕಾನನದಿ
ಸುರಿದು ಹೃದಯದ ರಸವ ತಾನೆ ಸವಿಯುವಳಲ್ಲಿ:—

ಸಂತೋಷ ಲಹರಿಯಲಿ ತೇಲಿಬಹ ಯೌವನವೆ!
ಸಂತಾಪವೀಚಿಗಳ ಸೀಳಿಬಹ ಜೀವನವೆ!
ಸ್ವಚ್ಛಂದ ಸಾಹಸವ ಹೇರಿಬರುತಿಹ ನಾವೆ!
ಸ್ವಾತಂತ್ರ್ಯ ಸಂಭ್ರಮದಿ ಹಾರುತೇರುತ ಬರುವೆ!
ಸಡಗರಿಸಿ ಬಾರಿತ್ತು! ಸೆಡವಿನಲಿ ಬಾರಿತ್ತು!
ಕಲ್ಲಬಂಡೆಯ ದಡವ ಹೊಡೆದೊಡೆದು ಸೇರಿತ್ತು!
ನಿನ್ನ ಭಾಂಡವ ಮುರಿದು, ಬಗೆ ಬಗೆಯ ಬಣ್ಣಗಳ
ನುಣ್ಣಿಸಿದ ಬಣ್ಣಿಸಿದ ಕನಸುಗಳ ಚೆಲ್ಲಿತ್ತು!

# ನಲ್ಕೆ

ನಿನ್ನೊಡವೆಯೆನಲಿದೇ ಕಾಮವಾಸನೆಯೆಂಬ
ಕೂರಸಿಯು ಧಾರೆ? ಒರೆಯಿಕ್ಕಿ ಕೊಳ್ಳುವೆನಿದನು.
ಪ್ರಾಣಿಕೋಟಿಗಳ ಜೀವನ ರಸವ ಕುಡಿ ಕುಡಿದು
ಆರದಾಸರಿನಿಂದ ಝುಂಕರಿಸುತಿಹುದಿಂದು.
ಪ್ರಲಯದುಲ್ಕೆಯು ರಭಸದಿಂ ಬಿದ್ದು ಎನ್ನೆದೆಗೆ
ಮಲಗಿರಲಿ ಬಿರಿದ ಮುಗುಳಂತೆ ಬಾಡುತಲಿಲ್ಲೆ.
ಲೋಕವಿಜಯದ, ಜೀವಗೊಲೆಯ, ಘನಪಾತಕದ
ಪಾಪಿ! ಮಾಯಲಿ ಎನ್ನ ಕಣ್ಣೀರ ಗಂಗೆಯೊಳೆ.

ಮೆಯ್ಸಿರಿಯ ಮದದಿಂದ ಮೆಯ್ಯೇರಿ ಮೆರೆ ಸುಗ್ಗಿ!
ಒಪ್ಪುವುದು ನಿನಗಿಂತು ತಿಳಿವ ಮಸುಕಿಪ ಮೋಡ!
ಜೀವಿಗಳ ಬಾಳ್ಕೆಯಲಿ ಯೌವನವೆ ಸುಗ್ಗಿಯಲ?
ಸುಗ್ಗಿಯೋ ವಿಶ್ವಜೀವನದ ಯೌವನವಲಾ?
ಒಂದೆ ತೊಟ್ಟಿನ ಒಂದೆ ಗುಟ್ಟಿನೊಂದೇ ಬೆಡಗಿ
ನೊಂದೆ ಕಂಪಿನ ತಂಪಿನೆರಡು ಮೊಗ್ಗೆಗಳಂತೆ,
ಸುಗ್ಗಿಯೋ! ಯೌವನವೆ! ಬಾಳಿ ಬದುಕಿರಿ, ಬೆದಕಿ
ಆವ ಬದುಕಿನೊಳಾವ ಸತ್ವವಿದೆಯೋ ಹುಡುಕಿ.

ಕಮ್ಮಾರರೆ! ದೇಹಿಗಳ ಕುಟ್ಟಿ ಹುಡಿಮಾಡಿ ಉರಿ
ನಂದದೇ ಧಗಧಗಿಪ ಕುಂಡದಲಿ ಕೆಡೆಯುವಿರೆ?
ಕೊಂದು ಕರಗಿಸಿ ಮೇಲೆ ತೆಗೆದೆರೆದು ಬೇಕಾದ
ಚಂದದಲಿ ರೂಪದಲಿ ಬಣ್ಣದಲಿ ಸಮೆಯುವಿರೆ?
ಮಂದಿಗಳ ಹಿಂದು ಮುಂದಿಗೆ ನೀವು ಕೊಡುವೊಪ್ಪ,
ಸುಂದರಾಕಾರ ಸೌಷ್ಠವಿರಲಿ! ಏನೆನ್ನ
ಬಂದು ಮೂದಲಿಪಿರೇ? ಎದೆಯ ಕಾಯಿಪಿರೇನು?
ಆವ ಕೈಗೆಲಸಕ್ಕೆ ದೊರೆವುದೋ ನೋಡುವಿರೆ?

## ಮಾದ್ರಿಯ ಚಿತೆ

ನೀವತ್ತ! ನಾನಿತ್ತ! — ನಮ್ಮ ನಡುನಾಡಿನಲಿ
ತಾರೆಗಳು ಬರಿದೆ ಮಿರುಗುವುವು ನಂದುತಲಿಹವು;
ವಿರಹಿಗಳ ಮಿದಿದು ಕೂಗೆಬ್ಬಿಸುವ ನೆನಪುಗಳ
ಹೊಡೆಮಿಂಚು, ಬಿರುಗಾಳಿ, ಜಡಿವ ಭೋರೆಂಬ ಮಳೆ,
ಗುಡುಗುಡಿಪ ಕಾರ್ಮೋಡವೆಲ್ಲ — ಮಾಯಕದಂತೆ
ಒಡನೊಡನೆ ಬಂದು ಕಣ್ಣನು ಮರುಳುಗೊಳಿಸುವುವು;
ಆರಿಗೂ ಕಾಣದಂತಾಗಸದಿ ಕರಗುವುವು;
ಕರಗಿ ಕಣ್ಮರೆಯಾಗಿ ದೂರದಿಂದಣಕಿಪುವು.

ಅರ್ಥವೆನಿತಿದ್ದರೂ, ರಸಭಾವ ತುಳುಕಿದರು,
ವ್ಯರ್ಥವಾಗುವ ತೆರದಿ ಮೇಳಕೊದವದ ಗಾನ —
ಎನ್ನ ಹಾಡಿಂತು ವಿರಸತೆಗೊಂಡು ಕಾಡಿನಾ
ಮೂಕಾನುಭವದಿ ಲಯುವಪ್ಪುದೆಂಬುದು ವಿಧಿಯೆ?
ಕೋಟಿಕೋಟಿಗಳ ಕೊರಲಿನ ಮಧುರ ನಾದದಲಿ
ಹಜ್ಜೆಗಳನಿಟ್ಟು ಬಹುದಾರ ಬಿರುದಿನ ಕೀರ್ತಿ —
ಮದ್ರಾಧಿಪನಮಗಳು, ಪಾಂಡುನರಪನ ಗರತಿ,
ಇಂತು ನೆಳಲಿನ ಕೂಡೆ ಸರಸವಾಡುವುದೆ ಗತಿ?

ಹಸ್ತಿನಾವತಿಯ — ಸಿರಿಯೋಲಗದ, ಮಂಡಪದ,
ಸಿಂಹಾಸನದ, ಚಾಮರದ, ಹಿಡಿದ ಬೆಳ್ಗೊಡೆಯು,
ಅಡಿನೆಳಲೊಳಲ್ಲಿ ಅರಗಿಣಿಗಳಂದದಿ ನಲಿದು,
ಸವತಿ ಸೊಗಗಳ ಹಂಚಿ ತಣಿದು ಸಂತಸಗೊಂಡು,
ಎರೆಯನೊಲ್ಮೆಯ ಹೊನಲ ಎರಡು ದಡದಂತಪ್ಪಿ,
ಅವನೆದೆಯ ಬಟ್ಟೆಯೆರಡಂಚಿನಂದದೊಳೊಪ್ಪಿ,
ಜೀವ ಹಲವಾದರೇನೆಮ್ಮ ಪರಮಾತ್ಮನಲಿ
ಭಾವವೊಂದೇ ಎನಲು ಸೇರಿರ್ದೆವೈಕ್ಯದಲಿ.

# ನಲ್ಕೆ

ಮೂಡಕಡಲದೊ! ಮನದ ಉಬ್ಬೆಗದ ಕುದಿಯಿಂದ
ಓಡುತೋಡುತ ಬಂದು, ನೀಳ್ದನಿಯ ನಿಟ್ಟುಸಿರ
ಪಾಡಿನಿಂ ಭರತಖಂಡವನಪ್ಪಿ ಮರುಳುವುದು.
ಪಡುಗಡಲು ಬೆಳ್ನೊರೆಯ ನಲ್ನಗೆಯ ಸಡಗರದಿ
ನಲಿ ನಲಿದು ಮೃದುಲಚುಂಬನವನಿತ್ತೋಡುವುದು.
ಅಂತೆಮ್ಮ ಕೇಳಿಗಳ ನಡುವೆ ಭರತಾತ್ಮಜನ
ಸಂತಸದ ಸರಸ ಸಂಸ್ಕಾರ ಸಮರಸಗೊಂಡು
ಬೆರೆತೊಂದೆ ಬಣ್ಣದಲಿ ನುಣ್ಪಿನಲಿ ಮೆರೆದಿತ್ತು.

ಎಮ್ಮ ಜೀವವೆ ಕೊನರಿ ಕುಡಿಗಳನು ಬಿಟ್ಟಂತೆ,
ಎಮ್ಮ ಸತ್ತ್ವವೆ ಕಿರಿಯ ತೊರೆಗಳಲಿ ಹರಿದಂತೆ,
ಎಮ್ಮಾಸೆ ಬೆಂಕಿ ಸೊಡರುಗಳನುರುಹಿದ ತೆರದಿ,
ಎಮ್ಮ ಬಾಳ್ವೆಯ ಬಿಂಬ ಮಾಯೆಗನ್ನಡಿಯೊಳಗೆ
ಭಿನ್ನ ಭಿನ್ನಾಕಾರದಿಂದಲೊಪ್ಪಿದ ತೆರದಿ,
ಒಪ್ಪುತಿಹರಿಂದು ಮಕ್ಕಳು—ನಾಳೆಯರಸುಗಳು!
ಎಮ್ಮಾತ್ಮಶಕ್ತಿಯಿಂತೀಗ ಫಲಿಸುವುದಾಯ್ತು
ಜನ್ಮವೀ ಜವ್ವನದೆ ಬೆಳಗಿ ಪಾವನವಾಯ್ತು.

ಜೀವನದನಂತತೆಯ ಭಾವನೆಯಪಾರತೆಯ
ಸಾರಿ ಘೋಷಿಸಿ ನಲಿವನಂತವಾಹಿನಿ—ತಾನ
ಪಾರವಾಗಿರದೆ? ಅದರಂತೆ ನಮ್ಮಾಯುತಿಯ
ಸವಿವ ಸೊಗ ಸಲುವ ದುಗುಡಗಳೆಲ್ಲ ಕವಿ ಕವಿದು,
ಬೆರೆಬೆರೆಯುತೊಂದಾಗಿ ಮುಂದಾಗಿ ಹರಿಹರಿದು,
ಆವುದೋ ದಿವ್ಯಭಾಷೆಗಳ ಸಂದೇಶವನು
ಕೊಡಲೆಂದು, ಮಡಿಮಡಿದು ಮೇಲೇರುತಿವೆ; ಮತ್ತೆ
ಒಂದೆ ವೇಣಿಯಲಿ ಹಲವೊಂದಾಗಿ ಹರಿಯುತಿವೆ.

## ಮಾದ್ರಿಯ ಚಿತೆ

ಒಮ್ಮೊಮ್ಮೆ ಸುಖಸೌಖ್ಯವೊಮ್ಮೊಮ್ಮೆ ಕಡುದುಃಖ,
ಒಮ್ಮೊಮ್ಮೆ ನಗೆ, ಸರಸ, ಒಮ್ಮೊಮ್ಮೆ ಅಳು ವಿರಸ—
ನಮ್ಮ ಹೃದಯದ ತಂತ್ರಿಗಳೊಳಾವುದನು ಮಿಡಿಯೆ
ಹೊಮ್ಮುತಿಹುದಾವ ನಾದವೆನುತ್ತೆ ತಿಳಿದಿಹೆವೆ?
ನಮ್ಮದೊಂದೇ ಹಾಡು—ಸಂತಸದಿ ಕುಣಿಯುವುದು
ದುಗುಡದಲಿ ಕುಗ್ಗಿ ಮುಗ್ಗರಿಸಿ ಬೀಳುವುದೆನಲು
ಬಾರಿಸುವ ಕೈ ಬೇರೆ—ಕೇಳುವಾ ಕಿವಿ ಬೇರೆ!
ಪರತಂತ್ರರೈ ನಾವು—ನುಡಿಯುವೆವು ನುಡಿಸಿದರೆ.

ಬದುಕಬೇಕೈ ಬಾಳಬೇಕು; ಲೋಕವನೆಲ್ಲ
ಜಯಿಸಬೇಕೈ ಆಳಬೇಕೆಂದು ಗಳಹುವುದೆ
ನಮ್ಮ ಅಧಿಕಾರ; ಅಂತೆಸಗುವುದೆ ನಮ್ಮ ಬಲ;
ಅನಿತುದ್ದ ಪೌರುಷವ ಉಕ್ಕೇರಿಸುವುದೆ ಚಲ;
ಅನುಭವತರಂಗಗಳ ಈಜಿ ದಾಟುವುದೆ ಫಲ;
ಹೊಸ ಕಲ್ಪನೆಯೆ ನಮ್ಮ ಜೀವನಕ್ಕಾಡು ಹೊಲ;
ಬಾ ಹೋಗು ಸಿಲ್ಲೆಂದು ಇಂದ್ರಿಯವ ಚೋದಿಸುವ
ಆ ದಿವ್ಯ ಶಕ್ತಿಯೊಂದಿರುವುದದೆ ದೈವಬಲ.

ಇದಕಾಗಿ ಕಂಬನಿಯ ಮಿಡಿವೆನೇ? ಈ ದೈವ
ಮಿದಿಯಲಿಲ್ಲಾರಾರ? ಸದೆಬಡಿಯಲಿಲ್ಲಾರ?
ಕಾಲ ಗರ್ಭವ ಸೀಳಿ, ಕಳೆದ ಸೊಬಗನು ಬೆದಕೆ—
ಹಾಳಾದ ಸುಗ್ಗಿಗಳ ಮುಗುಳಾಸೆಯೆನಿತೆನಿತೊ!
ರಾಜ್ಯಗಳ ಹುಡಿಗೆಯ್ದ ರಾಜದಂಡಗಳೆನಿತೊ!
ವಿಶ್ವಮೋಹನ ರೂಪ ಚಿತ್ರಶಿಲ್ಪಗಳೆನಿತೊ!
ಎಲ್ಲ ಚಂದಗಳಿದ್ದು ದೇವರೊಲವಿಲ್ಲದೇ
ಕಂದಿಹೋದುವು ಕುಂದಿ ಸುತ್ತುವುವು ನಿಲ್ಲದೇ.

## ನಲ್ಮೆ

ಸವಿತೊದಲತೊಂಡಿನಲಿ ಕಿವಿಬಂಡ ಸುರಿಸುತಿಹ
ನಮ್ಮ ಕನ್ನಡ ಹಕ್ಕಿ ಯಾವ ಕಾಲದ ಕವಿಯೊ!
ಕೊರಲ ದನಿ ಬುಗ್ಗೆಯಲಿ ನಮ್ಮೆದೆಯ ತೊಳೆವ ಪಿಕ
ಆವ ಜನ್ಮದಲಿ ಭಾಷೆಯ ಮರೆತ ಗಮಕಿಯೋ!
ಅರಲೆದೆಯ ಹೀರಿ ತನ್ನೊಳೆ ಮೊರೆವ ಹೆಣ್ದುಂಬಿ
ಆವ ನಲ್ಲನನಗಲಿ ಹಾಡುತಿಹ ವಿರಹಿಣಿಯೋ!
ಶಾಪವೋ ಶಾಪವಿದು—ವಿಧಿಯ ಸಂಕೋಪವಿದು
ಎಲ್ಲ ಗುಣಗಳನಿತ್ತು ಒಂದೊಂದ ಕೊಡದಿಹುದು.

ಮುಳುಗು ಮುಳುಗಿಚ್ಛೆಯಲಿ; ಅದರೊಂದು ತುಂತುರಾ
ದರು ಹನಿಯುದಿರಲೊಳಗೆ! ಕಂಪಿನಿಂ ಕಂಪಿಂಗೆ
ಎರಗೊ; ಪರಿಮಳದ ರಜವೊಂದಾದರೂ ನಿನ್ನ
ಕಿರಿಯ ರೆಕ್ಕೆಯನಂಟದಿರ್ಕೆ! ಮಿಂಚುಯ್ಯಲೆಗೆ
ಸರಿಯೇರು, ತೂಗು, ತೊನೆ; ಆದರೇನಾ ಬವಣೆ
ತಿರುಗಿಸದಿರಲಿ ನಿನ್ನ ಬುದ್ಧಿ ವಾಸನೆಗಳನು!
ಇದುವೆ ವಿರಹಿಗಳಿಗಿಹ ಸಂದೇಶ! ಗತಿ! ನಿಯತಿ!
ಇದುವೆ ಕಟ್ಟಿದೆ ಕಾಡಮರೆಹೊಕ್ಕ ಜೀವಿಗಳ.

ಕಾಲದೊತ್ತಿನಲಿ ಹಿಂದುಳಿಯಲಾಗದು; ಲಗ್ಗೆ
ಯಾಳಪಡೆ ಮುಂದೊತ್ತೆ ಹಿಂಗಬಾರದು; ಮಧುರ
ಗಾನಗಳ ಮೇಳದಲಿ ವಿಷಮ ಶ್ರುತಿಯ ಹಿಡಿದು
ಹಾಳುಮಾಡಲು ಬಾರದದರಿಂದೆ ಸಂತಸದ
ಸಾಲು ಮುನ್ನುಗ್ಗಿ ಬರೆ—ತೆರುವ ಕಪ್ಪವ ಕೊಟ್ಟು
ಹೋದಬಾರದ ಸೊಗವ ನೆನೆದು ಕಂಬನಿಬಿಟ್ಟು
ರೋದಿಸದೆ ವಾದಿಸದೆ ರೂಢಿಯೆಂತಿಹುದಂತೆ
ಸಾಧಿಸುವುದೇ ನಮ್ಮ ಮೇಲ್ಮೆ—ನಮ್ಮಾ ಹೆಮ್ಮೆ.

## ಮಾದ್ರಿಯ ಚಿತೆ

ಮರೆತುಹೋಗಲಿ ವಿರಹ! ಜಾರಿಹೋಗಲಿ ದುಗುಡ!
ಕಂಬನಿಯ ಬುಗ್ಗೆ ಬತ್ತಲಿ! ಸುಯ್ಯ ರೋದನದ
ಮಿಡುಕ ಮರೆಹೊಗಲಿ ಸುಗ್ಗಿಯ ಚಿಗುರ ಕೆಂಪುಗಳ!
ಉಸಿರು ಹಸರಿಸಲಿ ಕಮ್ಮಲರ ಸೀಳೆಸಳಿನಲಿ!
ಯೌವನ ವಸಂತರಾಜರ ಬರವಿನಲಿ ನಲಿದು
ಪುಲಕಗಳ ಗುಡಿಗಟ್ಟಿ, ನಗೆಯ ಮಾಲೆಯ ಕೋದು
ಉತ್ಸವದಿ ಕುಣಿದು ಕಾಲಂದುಗೆಯ ದನಿಯಿಂದೆ
ಮೃತ್ಯುವಾಗಮನವಾರ್ತೆಯ ಮರಸಿ ಮರೆದಿರ್ಪೆ.

ರಾಜಚೂಡಾಮಣಿ! ವಸಂತರಾಜನೆ ಬಾರ!
ಅರಲುತಿಹ ಹರೆಯಗಳ ಸೌಖ್ಯಗಳ ನೀ ತೋರ!
ಸುರಿಸು ಭಂಡಾರದಲಿ ಬಯ್ತಿರುವ ಹರಳುಗಳ;
ನಗೆಯ ಸೂಸುವ ರಸವ ಚೆಲ್ಲುತಿಹ ಮುಗುಳುಗಳ;
ಎನ್ನ ಹೆಣ್ತನದ ಮೆಯ್ಸಿಂಗರಕೆ ನಿನ್ನ ನನೆ,
ನಿನ್ನರಲು, ನಿನ್ನ ಕುಡಿ, ನಿನ್ನ ಚಿಗುರೆಳೆಯ ಲತೆ,
ನಿನ್ನ ಸೌಂದರ್ಯ, ನಿನ್ನೀ ರೂಪ, ನಿನ್ನೊಪ್ಪು—
ನಿನ್ನ ಸರ್ವಸ್ವಗಳನರೆಗಳಿಗೆ ಕೊಡಲೊಪ್ಪು.

ನಳನಳಿಸುತಿಹ ನಲ್ಲರೆಲ್ಲರನು ನೀನೊಂದೆ
ನಲ್ಮೆಯಲಿ ಕೋವಂತೆ ಮಲ್ಲಿಗೆಯ ಸುರಿವೆನಿದೊ!
ಮುಗುದೆಯರ ಮುಚ್ಚಿದೆಯ ಬಿಚ್ಚಿ ಅರಳಿಸುವಂತೆ
ನೈದಿಲೆಯ ಮೊಗ್ಗೆಗಳ ಬಿಚ್ಚಿ ಅರಳಿಸೆನಿದಕೊ!
ರಸಿಕನೆದೆಯಿಂ ಕಾವ್ಯರಸವ ಚೆಲ್ಲಿಸುವಂತೆ
ತಾವರೆಯ ಅರಲಬಂಡನು ಹೀರಿ ಸವಿಯುತಿಹೆ;
ವಿಷಯಗಳ ಹಂದರೊಳು ನೀ ತೂಗಿ ನಲಿವಂತೆ
ಬಿರಿದ ಮಾಮರದ ಹಿಂದೋಳದಲಿ ತೊನೆವೆನಿದೊ!

ಒಡಲು ಸಾವಿನ ಮೇವ ಹೊಲವಾದರೇನಣ್ಣ ?
ತೊಡಿಸುವೆನು ವನದೇವಿ ಕೊಡುವ ಕಾಣಿಕೆಗಳನು.
ಬಂದು ಮೇಯುವ ಮೃತ್ಯು ಆನಂದದಲಿ ಬಂದು
ತಿಂದು ತೇಗಲಿ! ಧನ್ಯವೆನಿಸಲದರಾಯುಷ್ಯ!
ಕುರುಳಿಂಗೆ ಚಿಗುರು; ಮುಂಗೈಗೆ ಬಳ್ಳಿಯ ಕಡಗ;
ಕಿವಿಗೆ ಸಿರಿಸದ ಕೊಪ್ಪು; ಮೊಗಕೆ ಕುಂದದ ನತ್ತು;
ಕೊರಲಿಂಗೆ ಮೊಗ್ಗೆಸರ; ತೋಳಿಂಗೆ ನನೆಬಂದಿ;
ಸುಗ್ಗಿ ಸಿಂಗರಹೊಂದಿ ಮೆರೆವೆನೈಕ್ಯದೊಳೊಂದಿ.

ಇಂತು ತನ್ನೊಳು ತಾನೆ ನುಡಿಯುತ್ತ ನಡೆಯುತ್ತ,
ತನ್ನಳಲ ತಾನೆ ಸಂತವಿಸುತ್ತ ತವಿಸುತ್ತ,
ಕಳೆದುದನು ಮರವೆಯಲಿ ತೊಡೆಯುತ್ತ ತಡೆಯುತ್ತ,
ದೈವಬಲ ವಾರ್ಧಿಯಲಿ ಮನುಜಬಲ ತೆರೆಯೆಂದು,
ಅದರೊಳಗೆ ಸುಳಿವುದೇ ಕೊರೆವುದೇ ಗರ್ಜಿಪುದೆ
ನಮ್ಮ ಪಾಡೆಂದು, ಬಗೆತಂದು ಧೃತಿಯಾಂತಂದು,
ಕಣ್ಣೀರ ತೊರೆದು ಬಗೆ ಮೋಡಗಳ ನೀಡಾಡಿ
ವಲ್ಲಭನನಗಲಿದರು ಮೆರೆಯುತಿರ್ದಳು ಮಾದ್ರಿ.

*　　*　　*　　*　　*

ಅಲ್ಲಿ ಶತಶೃಂಗಾದ್ರಿತಟದ ಕಾವಣಗಳಲಿ,
ಬಳ್ಳಿಮಾಡಗಳಲ್ಲಿ, ತಳಿರ ಸಾಲೆಗಳಲ್ಲಿ,
ಮಾವಿನುಪ್ಪರಿಗೆಯಲಿ, ನಿರಿಗನೋವರಿಯಲ್ಲಿ
ವಿಹರಿಸಿರ್ದಳು ರಾಣಿ; ಮಾಡಲಿಹುದೇನುಂಟು ?
ಕೂಡಲಾವುದು ನಂಟು ? ತಿಳಿಯದೇ ತಿರುತಿರುಗಿ,
ಆಡುವುದೆ ಹಾಡುವುದೆ ನಗುವುದೇ ನಲಿವುದೇ
ಜೀವನದ ಕರ್ಮ; ಜೀವದ ಧರ್ಮ; ವಿರಹಕಿದೆ
ಲೇಸಾದ ಮದ್ದೆಂದು ತೋರಿಸುವ ತೆರದಿಂದೆ.

## ಮಾದ್ರಿಯ ಚಿತೆ

ಸಾಮಾನ್ಯ ಗಿರಿಯಲ್ಲ—ಅದರ ತಪ್ಪಲೊಳೆತ್ತ
ಸಾಮಗಾನದ ಬಿಂದು ಹನಿಯಾಗಿ ಸುರಿಯುತಿದೆ;
ವೇದ ವೇದಾಂತಗಳ ತತ್ವ ನಿರ್ಝರ ಘೋಷ
ಶಾಂತಿ ಶರಧಿಯ ಮೇಲೆ ವಲಿಯನೆಬ್ಬಿಸುತಲಿದೆ.
ತಿಳಿವುಗಣ್ಣಿಗೆ ಗೋಚರಿಸದೆ ಮಸು ಮಸುಕಾಗಿ
ಕಲ್ಪನೆಗೆ ನಸುಕಾಂಬ ಯುಗದ ಸೀಮೆಯ ಹಿಂದೆ—
ಜೀವದಲಿ ತಿಳಿವನೂದಿದ ಅನಂತ ಪ್ರಾಣ
ವಾಯುವೆಲ್ಲಿಯೊ ಬೀಸುವಂದದನುಭವವಹುದು.

ಹಲವು ದೇಹಿಗಳಲ್ಲಿ ದೇಹದೊಳಗೇ ಸುಳಿದು
ಹೊಡೆದು ರೆಕ್ಕೆಗಳ ಗರಿನೋಯೆ, ಕಣ್ಣೀರ್ಸುರಿದು
ಅಳುತಿಹವು; ಕೆಲವು ಗಾಳಿಯನೇರಿ ಮೇಲೆದ್ದು
ಒಡಲ ಮೋಹವು ಸೆಳೆಯಲಲ್ಲೆ ಬೀಳುತಲಿಹವು;
ಕೆಲಕೆಲವು—ಬಾನತ್ತ ಸರಿದು ನೆಲೆ ಕಾಣದೇ
ಹಿಂದು ಮುಂದರಿಯದೇ ಗೂಡೆ ಲೇಸೆನುತಿಹವು—
ತೆರೆಯ ಹರಿದೀಡಾಡಿ ತನುವ ಒಂದೆಡೆ ಸೇರ-
ಲೆಳಸುತಿಹ ವೇದನೆಯೆ ಎಲ್ಲೆಲ್ಲಿ ಸುಳಿದಿಹುದು.

ಇಂತು ಸಾಧನೆ ನಡೆಯೆ, ತನ್ನ ಮಕ್ಕಳ ಕೂಡೆ
ಕಣ್ಣುಮುಚ್ಚಾಡುವನು ಪಡೆದ ಮೋಹದ ತಂದೆ!
ಮುಗಿಲ ಮುಂಡಾಡುತಿಹ ಮರದುದಿಯನೇರ್ದಂತೆ—
ಕೆರೆಯ ತಿಳಿನೀರಲ್ಲಿ ತೇಲ್ದಂತೆ, ಬಚ್ಚಲಲಿ
ಹರಿದೋಡಿ ಮರೆಯಾದ ತೆರದಿಂದೆ, ಋತುಗಳಲಿ
ತಲೆಮರಸಿ ವಿಧವಿಧದ ವೇಷಗಳನಾಂತಂತೆ
ಬಿನದಿಪನು; ಕಾಣುವರ್ಥದ ಮರೆಯ ಮಿಂಚಿನೊಲು
ಮಿರುಗುವರ್ಥಧ್ವನಿಯ ರೀತಿಯಲಿ ಸೇರಿಹನು.

## ನಲ್ಕೆ

ಅಲ್ಲೊಂದು ಸಮತೆಯಿದೆ; ತತ್ವದಾಕಾಶದಲಿ
ತೆಳ್ಳನೇ ತೇಲುವಾ ಹಕ್ಕಿಗೂ ಗೂಡಿಹುದು;
ಸಂಸಾರ ಬಂಧನದಿ ಸಿಲುಕಿ ಸಿಡಿಮಿಡಿಗೊಂಡ
ಪಂಚವರ್ಣದ ಹುಲಿಗು ಗವಿಯೊಳಗೆ ಬೀಡಿಹುದು;
ಬೇಡನಾ ಬಾಣದಿಂ ಬದುಕಿ ಬಂದಾವಿರಹಿ
ಹರಿಣಕಲ್ಲಿಯೆ ಪಕ್ಕೆಯಿದೆ; ಎಲ್ಲ ಕೊಂದೆನೆಲಿ;
ಕೊಂದು ಕೂಗುವ ನೀತಿ—ಕಠಿಣ ಶಾಸನ ಭೀತಿ
ಒಂದಿಲ್ಲವಿಲ್ಲಿ—ಕಾನನದ ಸಾಮ್ರಾಜ್ಯದಲಿ.

ತನ್ನೆದೆಯ ಪಡಿವೆರೆದು ಹಣಕಿ ನೋಡುವರಿಲ್ಲ;
ತನ್ನ ಮಾತಿಗೆ ಟೀಕೆ ಬರೆವ ಪಂಡಿತರಿಲ್ಲ;
ತನ್ನೆದೆಯ ಕಿಚ್ಚಿಗಿಂಧನವನೊಟ್ಟುವರಿಲ್ಲ;
ತನ್ನ ನೆಳಲಲ್ಲದಿನ್ನಾರು ಕರುಬುವರಿಲ್ಲ;
ಪರ್ಣಶಾಲೆಯ ಸೊಗದೊಳಿಂತು ಮೆರೆದಳು ಮಾದ್ರಿ
ಪಾಂಡುರಾಜನ ಕಿರಿಯ ರಾಣಿ, ಮೋಹದ ರಾಣಿ,
ಸುಖದ ದುಃಖದ ವಿಪುಲವೇಣಿ, ಪನ್ನಗವೇಣಿ,
ಭಾಗ್ಯದೇವತೆಯ ಕೊರಲಿಂ ಬಿದ್ದ ಕಟ್ಟಾಣಿ.

೪

ಎಣಿಕೆಯೊಳಗೆ ಸಿಲುಕಲಿಲ್ಲ;
ಭಾವನೆಯಲಿ ಹೊಳಕಲಿಲ್ಲ;
ಹಳೆಯ ದೈವವದುವೆ ಬಂದು ಮಾದ್ರಿಯೆದೆಯ ಟೊಣೆಯಿತು.
ಕನಸು–ನೆನಸು ಎಂಬುದಿದುವೆ
ಬಟ್ಟೆಯೊಳಗೆ ಹಾಸು ಹೊರಸು!
ಎರಡರೊಳಗು ಹೊರಗುನುಲಿವ ಕೈಯು ಕಾಣಿತ ಕಾಣದು.

## ಮಾದ್ರಿಯ ಚಿತೆ

ಪ್ರೇಮರಸದಿ ತುಂಬಿ ತುಂಬಿ
ತುಳುಕುತಿರುವ ಹೃದಯ ಪಾತ್ರ,
ಬೇರೆ ಭಾವನೆಗಳನೆಂತು ತುಂಬಲೆಡೆಯ ಕೊಡುವುದು ?
ಒಬ್ಬ ರಾಜನೊಂದೆ ಭಕ್ತಿ,
ಮಾದ್ರಿಯೆದೆಯ ಹಿಡಿಯೆ ಶಕ್ತಿ,
ಯಿದ್ದುದೆಲ್ಲವವನ ನೆನಹಿಗಾಗಿ ಸವೆದುಹೋದುದು.

ಸುಗ್ಗಿಯರಲು ಕುಣಿದು ಬನದಿ
ಚಿಗುರುದುಟಿಯು ನಕ್ಕ ದಿನದಿ
ವಿಶ್ವವೇ ವಸಂತನಡಿಯ ಹಾಸಿನಂತೆ ಹರಡಿತು.
ಮರವೆ ಮುಸುಕಿ ದಂಪತಿಗಳು
ಕೂಡೆ—ಜೊಂಪದೊಂದು ಮುಗುಳು
ತೊಟ್ಟು ಕಡಿದು ಜಾರುವಂತೆ ಗಂಡು ಬಾಳುಕೆಡೆದುದು.

ಹಕ್ಕಿ—ಹಾರು ಹಾರುತಲ್ಲಿ
ಗಾಳಿ ತಳಿರು ರಮಿಸುವಲ್ಲಿ
ಇನಿಯಹಣ್ಣು ಕುಟುಕುಗೊಂಡು ಬಾನಮರೆಯ ಸೇರಿತು.
ನವಿರ ಸೋಂಕಿ ಹಾರ್ವ ಮೊದಲೆ—
ಸವಿಯ ತುಟಿಯ ಹೀರ್ವ ಮೊದಲೆ—
ಹಾವಿನಂತೆ ಒಸಲಿ ಕನಲಿ ಶಾಪವುಸಿರ ಹೀರಿತು.

ನೆನಪು ಬಂತು—ಮುನಿಯ ಶಾಪ !
ಸುಡಲು ಬಂತು ಹೃದಯ ತಾಪ !
ಗುಳುಗುಳಿಸುತ ಗರ್ಜಿಸುತ್ತ ಮರವೆಯಲೆಗಳೇಳುತ
ಹೊಡೆದು ಕೆಡೆದುವವಳ ಕೆಳಗೆ ;
ತೇಲಿಸಿದುವು ಇಹಕೆ ಪರಕೆ !
ತಿಳಿವಿನೊಡನೆ ಬಂದುದವಳ ನೆನಪು—ಅಳಲ ಮಸೆಯುತ.

# ನಲ್ಮೆ

ನಿಂತು ನಿಂತು ಜಾನಿಸುತ್ತ,
ನಿಲ್ಲದಲೆದು ಸುಳಿಯುತತ್ತ,
ಮಲ್ಲಳಿಗಳ ಮಗಣಹಾಡ ಮೇಳಗೊಂಡು ನಡೆಯುತ;
ಮಾಯೆ ಕಟ್ಟಿ ಕುಣಿಸುತಿರುವ
ಮಣ್ಣಬೊಂಬೆ—ಅರಸಿ ಮಾದ್ರಿ
ಅರಸನೆಡೆಯ ಪಡೆಯಲೆಂದು ಹಿಂದೆ ಮುಂದೆ ನಡೆದಳು.

ತನ್ನ ಭಾಗ್ಯ—ಭೋಗ್ಯವೆಲ್ಲ,
ತನ್ನ ನಿಯತಿ ಸುಗತಿಯೆಲ್ಲ,
ಬಿನ್ನನಲ್ಲಿ ಮರವೆಯೊಳಗೆ ಮೌನದೊಳಗೆ ಕೆಡೆದಿರೆ.
ಅಳುವಳೇನು ಸುಯ್ವಳೇನು ?
ಬರಿದೆ ವಿಧಿಯ ಬೈವಳೇನು,
ಎಲ್ಲ ಮಾತ ಮರೆತನಂತ ಶಾಂತತೆಯನು ಬಯಸದೆ ?

ಗಾಳಿ ಬಂದು ಹೊಡೆದ ಬಳಿಕ
ಸೊಡರ ಮೊಗದೊಳಾವುದೆಸಕ ?
ಹೊಗೆಯ ಸೂಸಿ ಮೊಗವ ಮಾಸಿ ಮೌನವಡೆವುದಲ್ಲದೆ ?
ಮೌನಕಾವ ಬುದ್ಧಿ ? ತನ್ನ
ನಲ್ಮೆ ನಾಡ ಪಡೆವ ಸಿದ್ಧಿ !
ಪ್ರೇಮಕಿರುವ ಯೋಗ ಭೋಗ ದಾರಿ ತೋರ್ವುವಲ್ಲಿಗೆ.

ಬೇಸಿಗೆಯಲಿ ಬಿಸಿಲು ಮುನಿಸು
ಬೆಂಕಿಯಿಂದ ಸುಟ್ಟರೇನು ?
ಮುಗುಳ ಮುದ್ದು—ಅರಲಬಿರ್ದು ಬಳ್ಳಿಗೇನು ಮರೆವುದೆ ?
ಗಂಡ ನಡೆದ—ತನ್ನ ಸೈಪ
ಕೊಂಡೆ ನಡೆದ— ಸಾವಕೊಂಡು
ದಿಂಡುಗೆಡೆದನಾದರವಳ ಮೀಸಲೇನು ಕೆಡುವುದೆ ?

## ಮಾದ್ರಿಯ ಚಿತೆ

ಬಿಗಿದ ಹುಬ್ಬು, ಬಿಟ್ಟ ಕಣ್ಣು,
ತುಟಿಯ ಮಾಸುನಗೆಯ ಚೆನ್ನು,
ಬೊಮ್ಮ ಬರೆದ ರೂಪ ಮೃತ್ಯು ತಿದ್ದಿ ಬರೆದನಾಗಳೆ.
ಅವಳ ತೋಳ ಸೊಂಕಿನಿಂದ
ಅರಸಗಿಂತು ಬಂತು ಚಂದ!
ಆಹ! ಹೆಣ್ಣ ತೋಳು ಯಮುನ ಕಯ್ಯ ಕುಂಚವಾದುದೆ?

ಇನಿಯ ತುಟಿಯ ತೋಟಿಯಂತು
ಜೀವನವನೆ ಹೀರಿ ಬಂತು!
ಅಯ್ಯೊ ಕದಪಿನೊಂದು ಗಾಯ ಚಾಡಿಯೊರೆವುದೀಗಳು.
ತೋಳಬಂದಿಯೊಳಗೆ ನಲ್ಮೆ
ಯಾಳ ಹಿಡಿದು ಕೊಂದ ಬಲ್ಮೆ
ಗಾವ ಶಿಕ್ಷೆಯೆನ್ನುತವಳ ಮೊಗದ ಮೌನ ಕೇಳ್ವುದು.

ಶಾಂತಿ ರಸದಿ ಮುಳುಗಿ ಮುಳುಗಿ,
ಆವ ದಡಕೊ ತೇಲಿ ತೇಲಿ,
ಅವನ ದಿಟ್ಟಿಯವಳ ಮನವ ಹೇರಿ ಹಾರಿ ನಡೆದುದು.
ಮೌನದೊಳಗೆ ಮುಳುಗಿ ಹುಡುಕೆ
ಕಳಚಿ ಬಿದ್ದ ಜೀವರತ್ನ
ನಿನ್ನ ಕೈಗೆ ಸಿಲುಕದೆಂದು ತುಟಿಯು ಮಿಡುಕವೊರೆದುದು.

ಹುಬ್ಬಿನೊಳಗೆ ಗಂಟು ಕಟ್ಟಿ
ಆವುದಳಲ ಕೊಂಡು ನಡೆದ?
ಎಣಿಸಲಾರೆ ತಿಳಿಯಲಾರೆನೆಂದು ನೊಂದು ಕುದಿವಳು.
ಮಾತು ಬತ್ತಿಹೋದ ಬಳಿಕ
ಎದ್ದು ಬಂದ ಮೆಯ್ಯ ಪುಲಕ
ಆವ ನುಡಿಯನಡಗಿಸಿಹುದೊ! ಎಂದು ನಿಂದು ನೋಳ್ಪಳು.

## ನಲ್ಮೆ

ಕರೆದೆಯೆಂದು ಬಂದೆನಲ್ಲ;
ಬರಲು—ನಡೆದೆ! ನುಡಿಯಲಿಲ್ಲ!
ಎನ್ನ ತುಟಿಯನೇರಿ ಮೃತ್ಯು ನಿನ್ನ ಮೊಗಕೆ ಹಾರಿತೆ?
ಪ್ರೇಮಕಂಟಿ ಶಾಪವೆಂದು
ಮುನಿಯ ಮುನಿಸ ಮೀರಿತು ಬಂದು
ಮುಟ್ಟೆ ನಿನ್ನ ಪ್ರೇಮದೊಳಗು ಜವನ ಬಾರಿಯೀರ್ದುದೆ?

ಪಾಪವೆಂದು, ಶಾಪವೆಂದು,
ಕೆಟ್ಟ ವಿಧಿಯ ಕೋಪವೆಂದು,
ಹಳಿವುದೇಕೆ? ಜರಿವುದೇಕೆ? ಪ್ರಣಯದಗ್ನಿ ಸುಟ್ಟಿತು.
ನಿನ್ನ ಹಗಲಹೊತ್ತು ಹೋಯ್ತು.
ಇರುಳ ಬಾಳ್ಕೆಯೆನಿತು ಹೊತ್ತು?
ಇರುಳು ಹಗಲು ಸಾವು ಹುಟ್ಟು ಕೂಡುವೆಡೆಗೆ ನಡೆವೆವು

ನಂಟನಂತೆ ಬಂದನಾತ—
ಅವನ ಬಳಿಯೆ ನಡೆದ ನಾಥ!
ಗರತಿಯಾಗಿ ಸೇವೆಗೆಯ್ಯೆ ಹೋಗದಿರುವುದೊಳ್ಳಿತೆ?
ಇಳೆಯ ಬುತ್ತಿ ಬೇಡ ನಮಗೆ—
ಅಳಲ ತುತ್ತು ಸಾಕು—ಬಿಡುವೆ!
ಹೆಣ್ಣನಡೆಗೆ ಹಂದರೆಂಬ ಮಸಣವೆಂಬ ಗಡಿಗಳೆ?

ಹಚ್ಚಹಸುರ ಹಂದರಲ್ಲಿ
ನಗೆಯ ನುಡಿಯ ಸಡಗರದಲಿ—
ಇಳೆಯ ಹರಕೆ ಹಾಡುಗಳಲಿ ನಮ್ಮ ಕೂಟವೊಪ್ಪಿತು.
ಮೇಲುನಾಡ ಮಾಡದಲ್ಲಿ
ತಾರಗೆಗಳ ತುಪ್ಪುಳಲ್ಲಿ
ಹಸೆಯ ಹಾಸಿ ಕೂಡೆ ಸಾವು—ನೋಡುತೆಂತು ಸಹಿಪುದು?

## ಮಾದ್ರಿಯ ಚಿತೆ

ತಾರಗೆಗಳೆ! ಕಟ್ಟಿ ತೂಗಿ
ಬಾಲರವಿಯ ತೂಗು ಸೊಡರ.
ಬಾಸಮಂಡಪದಲಿ ಮದುವೆ! ಹಾಡುವವರೆ ಹಾಡಿರಿ!
ಮದುವೆಗಾವ ಸಿಂಗರಗಳು?
ಕಣ್ಣ ನೀರೆ? ಬಿಡುವ ಸುಯ್ಲೆ?
ಹಳಬರಿಟ್ಟ ತೊಡವು ಬೇಡ ನಮಗೆ, ಹೊಸತನೀವುದು.

ಜವ್ವನವೇ! ಬಿಡುವುದೆನ್ನ;
ಸಿಂಗರವೇ! ಸುಡುವುದೆನ್ನ;
ಇಂದ್ರಿಯವೇ! ಕೆಡಹು ನನ್ನ ಅರಸಕೆಡೆದ ಚಿತೆಯಲಿ.
ಜೀವ ಕುಳಿತ ಮಣೆಯ ಮಣ್ಣ
ದೇಹವಿದನು ಕೊಂಡು ನಿನ್ನ
ಮಡಿಲೊಳಿಟ್ಟು ಮುಚ್ಚು ಮಾತೃಭೂಮಿ! ಕಾಣದಂದದಿ.

ಎನ್ನ ದುಗುಡದಿಂದೆ ಬೆಂದು
ಸಂತಸದಲಿ ನೆನೆದು ನಲಿದು
ಎದೆಯ ಹಾಡ ಕೇಳಿ ಕುಣಿದ ಕೆಳೆಯ ಬಳ್ಳಿಮರಗಳೇ!
ಬೆದರಬೇಡಿ! ಬೆಚ್ಚಬೇಡಿ!
ಹಿರಿಯ ಜನ್ಮಕಿದುವೆ ಕರ್ಮ!
ಎಮ್ಮ ಧರ್ಮಕುಂಟೆ ಅರ್ಥ? ನಿಮಗೆ ತಿಳಿಯಲಿರುವುದೇ?

ಗಂಡು ಹೆಣ್ಣು—ಎಂಬ ಭೇದ—
ದೇವರೊಂದೆ ಮೆಯ್ಯಭೇದ
ಒಂದನಗಲಲೊಂದು ವಿಶ್ವರೂಪವರ್ಥವೆನಿಸದೆ?
ಜನನವೆಂಬುದಿದುವೆ ತೊಟ್ಟು;
ಹೆಣ್ಣು ಗಂಡು—ಜವಳಿ ಹುಟ್ಟು;
ಮೊಗ್ಗೆಯಾಗಿ ಕೂಡಿಬಿದ್ದು ಮುಗ್ಗಿ ಹೋಪುವೊಮ್ಮೆಗೆ!

*   *   *   *   *

## ನಲ್ಮೆ

ಓದಿ ಬಾರದಿರುವ ಬೋಧ—
ಒರಲಿಬಾರದಿರುವ ವೇದ—
ಕಾದಲೆಯರ ನಲ್ಮೆಯಿದಕೆ ಸಾಟಿ ಕಂಡರಿರುವರೆ ?
ತೆರೆಗಳಿರಲಿ ! ಸುಳಿಗಳಿರಲಿ !
ಅರಸನೊಲ್ಮೆ ಕಡಲಿನಲ್ಲಿ
ಮುಳುಗಿ ಮಿಾವ ಸಾವ ಹೆಣ್ಣ ನೋಂಪಿ ಜಸವ ಬೆಳಗಲಿ !

ಹುಲ್ಲಗಳೆಲ್ಲ ನಿಮಿರಿನಿಂತು
ಹುಲ್ಲೆ ಹಿಂಡು ಮಿಡುಕವಾಂತು
ಹೊದರ ಚಿಗುರುನೊಂದು ನೋಂತು ಬೀಳುಕೊಂಡುವಾಕೆಯ.
ಕಾಡಿನೆದೆಯ ಗವಿಗಳೊಳಗೆ,
ಬಳ್ಳಿಮನೆಯ ನೆಳಲಿನೊಳಗೆ,
ರೂಪ ಬರೆದು ಕೊಂಡುದೇನು ಬನದ ಕತ್ತಲಾಕೆಯ ?

ಎಂದಿನಂತೆ ತರಣಿ ಹುಡುಕಿ
ನಂದುತಿಹೆಯ ? ಗಂಧವಹನೆ
ಎಂದಿನಂತೆ ಮೊಗ್ಗೆ ಹೂವನರಸಿ ನೋಡುತಿರುವೆಯ ?
ಬಾನ ಕಿವಿಯೆ ! ಬಿಟ್ಟು ಕೇಳ್ವೆ
ಕೇಳಲಾರದವಳ ಸುದ್ದಿ !
ಯುಗವು ಮುಂದೆ ನಡೆಯೆ, ಹಿಂದೆ ನೆಗೆದಳಾಕೆ ನೆಟ್ಟನೆ.

ದಂಡ ಹಿಡಿದು ಕೊಲುವ ಕೈಗೆ,
ಇಳೆಯ ಹಳಿವ ಜೋಗಿ ಬಾಯ್ಗೆ,
ದಿಂಡುಗೆಡೆದು ದೇವನಡಿಗೆ—ದುಡಿವ ಧರ್ಮಕರ್ಮಿಗೆ
ಸಾವ ಸುದ್ದಿ ಕೇಳಲೊಡನೆ
ತಣ್ಣಸೇರಿ ಬಸವು ಕೆಡದೆ ?
ಜವನ ಕೈಯ ಪಾಶಕಿಂತು ಕೊರಲ ಕೊಡುವರಿರುವರೆ ?

## ಮಾದ್ರಿಯ ಚಿತೆ

ಎಲ್ಲ ಜನಕು ನೀತಿಯೊಂದೆ;
ಎಲ್ಲ ನೆಲಕು ರೀತಿಯೊಂದೆ;
ಎಲ್ಲರೆದೆಗು ಭೀತಿಯೊಂದೆ! ಅದನು ತೊಡೆಯಲಾರರು.

ಹೋಗುವವರ ಕಂಡು ಮರೆತು
ಜೀವನಗಳ ಕೊಂಡು ಬೆರೆತು
ಕಾಲ ಬರುವ ವೇಳೆ ಬೆದರಿ ಸಾವ ಮೊದಲೆ ಸಾವರು.

ನಲ್ಲನೆಂದು ನಲ್ಲೆಯೆಂದು
ಬಲ್ಲಬೆಡಗು ನುಡಿಯನೊರೆದು
ಇಳೆಯ ಕಾಳುಗೆಡೆವ ಜನರ ಬೀಳುನುಡಿಗೆ ಸಲುವರು.

ಜೋಡುಗೊಂಡ ಮನದ ನಡುವೆ
ಮೂಡಿ ಬರಲು ಜವನ ಬಾರಿ
ಬಲೆಯ ಕಂಡ ಹಕ್ಕಿಯಂತೆ ಕೆಳೆಯ ಕಳೆದು ಹಾರ್ವರು.

ಎಲ್ಲಿ ಕಾಂಬುದಿನಿತು ನಲ್ಮೆ?
ಎಲ್ಲಿ ಯೆದೆಯ ಕೂರ್ಮೆ ಬಲ್ಮೆ?
ಮಾದ್ರಿ ಮಡಿದಳೇನು? ಅವಳ ಹಿಡಿದ ಮೃತ್ಯು ಮಡಿದುದು

ಮಡಿಯಲಾರದವಳ ಮೂರ್ತಿ!
ಮಾಸಲಾರೆದವಳ ಕೀರ್ತಿ!
ಜವನ ಕೈಯ ಸೊಡರ ಬೆಳಗಲವಳ ಚಿತೆಯ ಕೆಂಡವು.





# ಮುರಲೀನಾದ

೧

ಎಲ್ಲಿಗೆ ಪಯಣವೊ ದಾರಿಗ ನಿನಗೆ ?
ಚೆಲ್ಲಿರೆ ಕತ್ತಲೆ ಹಗಲಿನ ಮೊಗಕೆ,
ಸಾವಿನ ಬೀಜವ ಬಿತ್ತಲು ಸಂಜೆ
ಜೀವವ ಕರೆವುದು; ನೀನಿನಿತಂಜೆ !

ತಾವರೆಯೊದೆಯಲಿ ಮಲಗುತ ತುಂಬಿ
ಜೀವನ ಭಯದಲಿ ಅವಿತಿರೆ, ನಂಬಿ
ತಾರೆಯ ಬೆಳಕನು, ದಾರಿಯ ನಡೆವ
ಧೀರತೆಯೇನೈ ? ಬಿಡುಬಿಡು ಚಲವ.

ಕತ್ತಲೆಯೆಂಬೀ ಮದಿರೆಯ ಕುಡಿದು
ಎತ್ತೆತ್ತಲು ಘೂರ್ಣಿಸುತಿದೆ ಕಾಡು,
ಕಣ್ಣೀರ್ಸುರಿಸುವ ಎಳಮೆಯ ಕಂಡು
ಬೆನ್ನೊಳೆ ಬರುವವನಾವನೊ ಗಂಡು ?

ಎಳೆಯನು ನೀನೆಂದಿದೊ ಸಾರುವುದು
ಚೆಲುವಿನ ಕೇತನ—ನಿನ್ನೀ ಕದಪು;
ಹರಹಿದ ಹುಬ್ಬಿನ ಬಲೆಯಲಿ ಸಿಲುಕಿ
ಗರಿಹೊಡೆವುದಿದೋ ಆಸೆಯ ಹಕ್ಕಿ.

## ನಲ್ಕೆ

ನಾಳೆಯನೆಬ್ಬಿಪ ಕೋಳಿಯ ಕೂಗು
ಕೇಳಲು ದಾರಿಯ ಹಿಡಿ ನೀ ಹೋಗು.
ಜೀವನವೆಂದರೆ ಆಟದ ಬಯಲೆ ?
ನೋವಿನ ಗುರಿಯೊಳೆ ಜೀವಕೆ ನೆಲೆಯೆ ?

ಬಳಿಯೊಳೆ ಎಲೆಮನೆಯೊಂದಿಹುದಿಲ್ಲಿ
ಕಳಿವೆನು ವರ್ಷವ ದಿನದಂದದಲಿ;
ಹಗಲೆನ್ನುತೆ ಕುಣಿದಾಡದು ಬಯಕೆ
ಹೊಗೆ ಹಿಡಿಯದು ಕತ್ತಲೆಯದು ಮುಸುಕೆ.

ಏತಕೆ ನಿನ್ನಯ ನುಣ್ನುಡಿಗಳನು
ಭೀತಿಯ ಮೌನವು ಕಾಯುವ ಹದನು ?
ಎನ್ನೀಕಾವಿಯ ಎನ್ನೀಜಡೆಯ
ನನ್ನಿಯೆನುತ ನಂಬದೆ ನುಡಿಗೊಡೆಯ ?

ಅಹುದೆಲೆ ದಾರಿಗ ! ದಾರಿಯ ಕೆಲದಿ
ಕುಹಕತೆ ನಗುವುದು ನನ್ನಿಯ ತೆರದಿ;
ಬೆದರಿಕೆ ಸಹಜವು ದೂರದ ಜನಕೆ
ಬದುಕಿನ ನೆಲೆಯನು ಕಾಣದ ಮನಕೆ.

ಆರಿದೆ ಬಾಳಿನ ಮೊನೆಗಾಯದಲಿ
ಗಾರಪ್ಪುದು ಕೆಡೆವುದು ನೆತ್ತರಲಿ,
ಮುಗುಳಿನ ಮೊನೆಯಾದರು ಬೆದರುವುದು;
ಮಗಮಗಿಸುವ ಕಂಪಿಗೆ ಕೋಡುವುದು.

## ಮುರಲೀನಾದ

ಆದರದೇನೈ? ಕಾಂಬುದಿದೆಲ್ಲಾ
ಮೇದಿನಿಗಿಹ ಕವಡಿನ ಮುಸುಕಲ್ಲ.
ಮುದುರುವ ಮಾಗಿಯು ಮೆಯ್ಯೊಳಗೊಳಗೆ
ಉದಿಸುವ ಸುಗ್ಗಿಯು ಬಾರದೆ ಮೊಳೆಗೆ?

ಹೆಸರನು ಕೇಳುವೆ; ಹೆಸರಿನಗುಂಟೆ?
ದೆಸೆಯಿಲ್ಲದ ಮುನಿಗಿಲ್ಲದ ನಂಟೆ?
ಆವುದೊ ನಾಡಿಂದೂದಿದ ಗಾಳಿ
ಜೀವದ ಕಿಡಿಯನು ಉರಿಸಿದುದಿಲ್ಲಿ.

ಇನಿಯರು ನಿನಗಾರೆಂದೇಕೊರೆವೆ?
ಮೊನೆಮಾತಿಂದಲಿ ಬಗೆಯನು ಕೊರೆವೆ
ಗೆಳೆತನವಿಲ್ಲದೆ ಜೀವನವಿರದೆ?
ಸುಳಿಯಲು ಗೆಳೆತನವೊಂದೇ ಹೊಲವೆ?

ನೇಹವೊ? ಅದು ಬೆಳಗಿನ ಹನಿ ಮಂಜು;
ಮೋಹವೊ? ಜೀವವ ಹೀರುವ ನಂಜು;
ಆವುದನೊಲ್ಲದೆ ಕಾಡನು ಹೊಕ್ಕೆ
ಭಾವನೆಗಿಲ್ಲಿಯೆ ಮಲಗುವ ಹಕ್ಕೆ.

ಲೋಕವ ನಚ್ಚದ ಮುನಿಯಿವನೆಂದು
ಮಾಕರಿಸದಿರೆಲೆ ದಾರಿಗ ನೊಂದು.
ಮನುಜನ ಮಾಟದ ಹಬ್ಬವ ಮೆಚ್ಚೆ
ಮನದಾ ಮೌನದ ನೋಂಪಿಯೊಳಿಚ್ಚೆ.

# ನಲ್ಮೆ

ಸುಗ್ಗಿಯ ಚಿಗುರಿನ ರಾಗವ ಕಂಡು
ಹಿಗ್ಗುವನೀ ಮುನಿ ಸಂತಸಗೊಂಡು;
ಮುಗ್ಗುವ ಮುಗುಳಿನ ಮೋಹದ ಚಿಂತೆ
ಕುಗ್ಗಿಪುದಿವನನು ಲೌಕಿಕನಂತೆ.

ಎಳ ಹುಲ್ಲೆಯ ಚಕಿತಾಲೋಕನವು
ಕಲಿಪುದು ನಲ್ಮೆಯು; ಯೌವನದಿರವು
ಗಳಿಯಿಸುವಂತಿರೆ ಬಳುಕುವ ಲತೆಯ
ತಳಿರುಡಿಯಲು ಸುರಿವನು ಕಂಬನಿಯ.

ಗಿರಿತಟದಲಿ ತರುಮೂಲದೆ ಬಂದು
ಹರಿಯುವ ಕಾಳ್ಪುರದಲಿ ತಾ ಮಿಂದು
ಮರೆವನು ಧರಣಿಯ ಜೀವನದಿರವ,
ಸೆರೆಗೊಂಬನು ನಿಮಿಷದಿ ಚಿತ್ಸುಖವ.

ಬಾರೆಲೆ! ಎಲೆಮನೆ ಕರೆವುದು ನಿನ್ನ;
ಕಾರಿರುಳನು ಕಳೆ, ತೊರೆ ನೀನೆನ್ನ;
ನಚ್ಚಲುಬೇಕೈ ಮೆಚ್ಚಲುಬೇಕು
ಇಚ್ಛೆಗೆ ನೆಲೆಯೊಂದಾದರು ಬೇಕು.

ಅನ್ನಿಗನಿವನೆಂಬಂಜಿಕೆಯೇಕೆ ?
ತನ್ನವನೆಂದೇ ಮೂಡಲಿ ಎಣಿಕೆ.
ಎನ್ನಯ ನಿನ್ನಯ ಎರಕವ ಕಂಡು
ಚುನ್ನವನಾಡಲು ಆರಿಗೆ ಹುರುಡು ?

ಮೆಲ್ಲಿದೆ ರಾಗವ ಹರಿಯಿಸಿ ನಿಂದು
ಲಲ್ಲೈಸುವನೀ ಧರಣಿಯನಿಂದು;
ತಂಗದಿರಿನ ಪೂರದಿ ಮುಳುಗೆದ್ದು
ಕಂಗೆಟ್ಟಿವೆ ತಾರೆಗಳವು ತೊಯ್ದು.

ಆಡದು ಗಿಳಿ, ಮಾತಾಡದು ಮಧುಪ,
ಹಾಡದು ಪಿಕ, ಕುಣಿದಾಡದು ಹಂಸ,
ಅಪ್ಪಿನ ಬಿಗಿಯಲಿ ಮಲಗಿದೆ ಬಳ್ಳಿ,
ತಪ್ಪನೆ ಬಾ ಬಾರೆಲೆ ಮನೆಯಿಲ್ಲಿ.

೨

ಕರುಣೆಯದೆನಿತೋ ಜಗದೀಶನಲಿ !
ಧರೆ ಮಲಗಿರೆ ಮಬ್ಬಿನ ತಬ್ಬಿನಲಿ,
ಕರುಣೆಯು ಕರಗುತ ಕಿರಿ ಚುಕ್ಕಿಯಲಿ
ಮಿರುಗುವುದೈ ಜೀವದ ದಾರಿಯಲಿ.

ಕಾನನ ಮೊರೆವುದು, ಗಾಳಿಯು ಉಸಿರು
ಮೌನವ ಕೊರೆವುದು, ದುಗುಡದ ಬಸಿರು,
ಕಾರುವುದಳಲನು, ಹೀರುವುದಳಲ,
ಮಾರುವುದಳಲನು, ಕೊಳ್ಳುವುದಳಲ.

ಆಸೆಗೆ ಕೊನೆಯ ಜಲಾಂಜಲಿಯೆಂದು
ಸೂಸುತೆ ಬಿಸುಗಂಬನಿಗಳನಂದು
ದಾರಿಗನಿರುತಿರಲಾತನ ಪರಿಯ
ಆರೈಯಲು ಕೇಳಿದನಾ ಮುನಿಪ.

# ನಲ್ಮೆ

ಮೊಗವನು ಮುಸುಕಿದೆ ಗಂಟಿನ ಹುಬ್ಬು;
ನಗೆಯನು ಮುಸುಕಿದೆ ಚಿಂತೆಯ ಮಬ್ಬು;
ಪ್ರಾರಂಭದ ಮಧುಮಾಸದೊಳಿಂತು
ಆರಂಭಿಸಿತೇ ಮಾಗಿಯ ತಂಪು?

ಎಳವೆಯ ಕಾಲದಿ ಕುಣಿಯುವ ಜೀವ
ಇಳಿಹರಯದಿ ವಿರಮಿಸುತಲಿ, ನೋವ
ಕಳೆಯಲು ಬಳೆಯಲು ಪಕ್ವತೆಯಿಂದ,
ಕೊಳುವುದು ಮೃತ್ಯುವದನು ನಲವಿಂದ.

ಎದೆಯಲಿ ಬಯ್ಕೆ ಅದೇನೇನಿಹುದು?
ತೊದಲೊಳಗಾವುದು ಭಾವನೆಯಿಹುದು?
ಅದನೆಲ್ಲವ ತೆರೆ, ಎನ್ನನು ನಚ್ಚು;
ಒದವಿದೆ ನಮ್ಮಯ ನಲ್ಮೆಗೆ ಕೆಚ್ಚು.

ಒನದಾ ಸುತ್ತಲು ನೋಟವ ಹರಹಿ
ಮನವನು ಬಿಚ್ಚಲು ದಾರಿಗ ಬಯಸಿ
ನಿಡುಸುಯ್ಲಿನ ಹೊಡೆತದ ರಭಸದಲಿ
ಕೆಡೆದನು ಬಿಸುಗಂಬನಿಕಾಲಿನಲಿ.

ಮಾತೇ ಬಾರದು ಬಾಯ್ದೆರೆಗಳಲಿ
ಹೂತಿರೆ ನುಡಿ ದುಗುಡದ ಕೆಸರಿನಲಿ;
ಮಿಡುಕಾಡದು ತನು, ನುಣ್ದುಟಿನಡುಕ
ನುಡಿದುದು ಹೃದಯದೊಳಿಪ್ಪಾ ಕೆಡುಕ.

## ಮುರಲೀನಾದ

ಹೇಳುವೆ, ಹೇಳದೆ ಮರೆಯಿಸಲೆಂತು ?
ಬಾಳುವೆ; ಬಾಳುವೆಯಾಸೆಯದಿನಿತು
ಕನಲುತಿರಲು ಹುಸಿ ಜೋಗದೊಳಾನು
ಜನರನು ವಂಚಿಪ ಹದನುಂಟೇನು ?

ಆಗಲಿ ನಿನ್ನೀ ಜಡೆಕಾವಿಗಳ
ಸೋಗನು ನಂಬುತ ಬಿಚ್ಚುವೆನಳಲ,
ಕಣ್ಣೀರಿನ ಸಾಕ್ಷಿಯೊಳೊರೆಯುವೆನು
ಮಣ್ಣಿನ ದೇಹಕೆ ಬೆದರಿಕೆಯೇನು ?

ಊರಲಿ ಹೆಸರಿಪ ಹೆಮ್ಮೆಗಳಿರದ
ದೂರದ ನಾಡಿನ ದಾರಿಯ ಕೆಲದ
ಬೀಳು ಗುಡಿಸಲಿನ ಮಧ್ಯದಿ ತಂದೆ
ಕಾಲವ ಕಳೆಯುತಲಿರ್ದನು ಹಿಂದೆ.

ಬಳಿಯೊಳೆ ಕೆರೆ, ತೊರೆ, ಬೆಂಗಡೆ ಚಿಗುರ
ತಳೆದೆಳಿಲತೆಮನೆ—ಆಚೆಗೆ ಮುಗಿಲ
ಪರಿಧಾನದ ಪರ್ವತ ಶಿಖರಗಳು
ಧರಣಿಯ ಸಿರಿಯನು ಕಾಯುತಲಿಹವು.

ಅಲ್ಲಿ ಬಸಂತನು ಬಿನದವ ಬಯಸಿ
ಮೆಲ್ಲಲರುಯ್ಯಲೆ ಯೇರುತ ಸೊಗಸಿ
ಮಲ್ಲಳಿಹಾಡನು ಕೋಗಿಲೆ ಹುಗಿಲ
ಸೊಲ್ಲನು ಕೇಳುತ ಬವಣೆಯ ಮರೆವ.

## ನಲ್ಮೆ

ವನದೊಳಗಲ್ಲಿಯೆ ಮಾಮರವೇರಿ
ಜಿನುಗುವ ತುಂಬಿಗೆ ತಾನವ ಬೀರಿ,
ಕನಸಿನ ಸುಖಗಳ ನೆನಸಿನೊಳುಂಡು
ತಣಿದೆನು ಸೊಬಗಿನ ಮೇರೆಯ ಕಂಡು.

ಒಮ್ಮೆ ವಸಂತನ ಹುಗಿಲೆನ್ನೆದೆಯ
ಬಿಮ್ಮನೆ ಬಿರಿಯಿಸೆ ಕಾಡಿನ ಬಳಿಯ
ಬಳ್ಳಿಯ ಮಾಡದಿ ಹೂಗಳನಾಯ್ದು
ಮೆಲ್ಲೆಲರಿಗೆ ಮೈಯೊಡ್ಡಿದೆನಂದು.

ಆವುದೊ ಕೊಳಲಿನ ನುಣ್ದನಿಯೊಂದು
ಜೀವವ ಬೆರಸುತ ಬೆರಸುತ ಬಂದು
ದಾರಿಯ ನಾರಿಯ ದಾರಿಯ ತಡೆದು
ದೂರಕೆ ಸೆಳೆದುದು, ಹಾರಿತು ನೆಗೆದು.

ಮರೆತೆನು ಲೋಕವ ಲೋಕದ ನೆಲೆಯು,
ಮರೆತೆನು ಜನ್ಮವ ಜನ್ಮದ ಕೊನೆಯು;
ಮುರಲೀನಾದಾನಂದವ ಹೀರಿ
ಕರಣಗಳವು ಪಡೆದವು ಲೀನತೆಯು.

ಅರಿಯುವೆನೊಂದನು—ಗೋವಳನೆಡೆಗೆ
ಸರಿದೆಂದೆನು—ಮೋಹನ! ಗಾನಕ್ಕೆ
ಸೆರೆಯಾಳಾದೆನು; ಕರುಣಿಪುದೆಂದು
ಎರಗಿದೆನಾತನ ಪಾದದೊಳಂದು.

## ಮುರಲೀನಾದ

ಏನೆಲೆ ವನಿತೇ ಸಾಹಸವಿನಿತೇ!
ಗಾನದ ಹಕ್ಕಿಯ ಹಿಡಿಯುವೆನೆನುತೆ
ಚೆಲ್ಲಿದೆ ನೇಹದ ಕುಸುರಿಯ ಕಾಳ,
ಒಲ್ಲೆನೆನುತ ಊದಿರ್ದನು ಕೊಳಲ.

ಗಾನದ ನಾಲಗೆ ಸುರಿಸಿತು ವಿಷವ;
ಗಾನದ ಕೊಳಲದು ಕಾರಿತು ನೋವ;
ಗಾನದ ಕಡಿತಲೆ ಕಡಿದುದು ತನುವ;
ಗಾನವು ಹಾಡಿದುದೆನ್ನಯ ಸಾವ.

ಏನೆಲೆ ಮೋಹನ! ನಿನ್ನೀ ಜಗದಿ
ಗಾನವೆ ಸೀಮೆಯೆ? ಗಾನವೆ ಪರಿಧಿ?
ಹಾಡಿನ ಗೂಡಿನ ಹಕ್ಕಿಯ ತೆರದಿ
ಹಾಡಿಯೆ ಬಾಳ್ವುದೆ? ಸಾವುದೆ ಹಾಡಿ?

ತಾನಕೆ ಭಾವನೆಯೆಂಬುದೆ ಉಸಿರು;
ಗಾನಕೆ ಮುಗುದೆಯ ಪ್ರೇಮವೆ ಒಸರು;
ಒಲವಿನೊಳುಕ್ಕದ ಹಾಡಿನ ಹೊನಲು
ಮಳಲಿನ ರಾಶಿಯ ಬತ್ತಿದ ಹೊನಲು.

ಹುಲು ಬಿದುರಿನ ಬಿರುಕಿನೊಳಿನಿತಿಂಪು
ತುಳುಕುವುದಾದರೆ, ಮುಗುದೆಯ ನೋಂಪು
ಸುರಿಸುವ ಕೂರ್ಮೆಯ ಜಿನುಗುವ ಭಾವ
ಮರಿಸದೆ ನಿನ್ನೇಕಾಂತದ ಮನವ?

## ನಲ್ಮೆ

ಹೋಗಲಿ, ನಿರ್ದಯ ನಿಷ್ಠುರ ಮುರಲಿ
ಬಾಗಿಲ ತೆರೆಯಲಿ ಕಣ್ಣೆವೆಯಾಲಿ;
ಒಂದೇ ನೋಟವು ಹೀರಲಿ ಎದೆಯ;
ಒಂದೇ ಬೇಟವು ಬತ್ತಿಸಲೆದೆಯ.

ಊದಿದನಾತನು ಮುರಲಿಯನೊಮ್ಮೆ;
ಓದಿದನೆನ್ನಯ ಸಾವನದೊಮ್ಮೆ;
ಇನಿಯಳ ಕೆನ್ನೆಯ ಮುಟ್ಟದ ಅಧರ
ಇನಿದೆಂದೆನಿಸಿತು ಕಾಡಿನ ಬಿದಿರ.

ಎದೆಯಲಿ ಕೂಡಿತು ಗಾನವನಡವಿ
ಹೊದರಿನ ಹಕ್ಕಿಗೆ ರಸವನು ಕುಡಿಸಿ
ಪಡಿನುಡಿಯಾಗಿಸಿ ಮೌನದಿ ಮರಸಿ
ಕೊಡೆನೆಂದುದು ಕಾಡೆನ್ನೊಳು ಸೆಣಸಿ.

ಗುಡು ಗುಡಿಸುತ ಕುಡಿಮಿಂಚಿಂ ಹೊಡೆದು
ಹೊಡಕರಿಸುತೆ ಆಗಸದಲಿ ನೆಗೆದು
ಕಡೆಗೋಡುವ ಮೋಡದ ತೆರನವನು
ನಡೆದನು; ಕಾಣದೆ ಎನ್ನೀಹದನು?

ಹೆತ್ತವರೆಲ್ಲಿಯೊ ಬಂಧುಗಳೆಲ್ಲಾ
ಎತ್ತಲಿಹರೊ! ತಿಳಿದವಳಾನಲ್ಲ;
ಕತ್ತಲೆಯಿದೆ, ಎನ್ನಯ ನೆಲೆಯಿಹುದು;
ಸುತ್ತಲು ಜಗವಿದೆ, ದಾರಿಯದಿಹುದು.

## ಮುರಲೀನಾದ

ಆಸೆಯೆಸಳು ತಲೆಯೆತ್ತುವ ಮೊದಲೆ
ಸೌಸವವನು ಬಗೆ ಬೀರುವ ಮೊದಲೆ
ಹಾಸವರಳಿ ಕುಣಿದಾಡುವ ಮುನ್ನ
ಬೀಸಿತು ಸಂಜೆಯ ಗಾಳಿಯದೆನ್ನ.

ದೂರದ ನಾವೆಯ ಏರುವೆನೆನುತ
ಏರಿದೆ ಪ್ರೇಮದ ತರಣಿಯನೊಂದ;
ತೀರವು ನಿಲುಕದು, ಬಾರದು ನಾವೆ,
ಹೋರುವೆ ತೆರೆಯೊಡನೀ ಪರಿ ಸಾವೆ.

೨

ಎಂದಳುತಿರ್ಪಳ ಮುನಿಪತಿ ನೋಡಿ
ಕೊಂದೆಯೊ ಮೋಹನೆ ಎನ್ನನು ಕೂಡಿ ?
ಎಂದಾಕೆಯ ಬರಸೆಳೆದಪ್ಪಿದನು
ಮುಂದೊರೆಯಲು ನುಡಿಯುಡುಗಿರಲವನು.

ಮಾತಿದು ಬೇಡೆಲೆ ಮೌನವೆ ಸಾಕು;
ಪ್ರೀತಿಯ ಸೆರೆಮನೆ—ತಕ್ಕೆಯೆ ಸಾಕು;
ಮಾತಿನ ಸಾರವ ನುಣ್ದುಟಿಗುಣಿಸು;
ಹೂತಿಡು ಮುನಿಸನು ನಲ್ಮೆಯ ಸಲಿಸು.

ಸಾವಿರ ತಪ್ಪನು ಮನ್ನಿಸು ನೀರೆ,
ಸಾವಿರದಪ್ಪಿದು ನಗೆಯನು ತೋರೆ !
ಪ್ರೇಮದ ನುಡಿಯಿದು ಬಿಸುಗಂಬನಿಯು;
ನೇಮದ ಮುದ್ರೆ ಇದೆನ್ನಯ ತುಟಿಯು.

# ನಲ್ಮೆ

ಸುಡುವೆನು ಕಾವಿಯ—ಕವಡಿನ ಮುಸುಕ;
ಕಡಿವೆನು ಜಡೆಯ—ನಿರಾಶೆಯ ತೊಡಕ.
ಮೊಗವೊಗದೊತ್ತಿನೊಳಾದುದು ಸಿದ್ಧಿ;
ಹಗುರದ ಜೀವಕೆ ದೊರೆತುದು ಬುದ್ಧಿ.

ಇದಕೋ ಸವಿ ಸವಿಯಾಲಿಂಗನದಿ
ಎದೆಯಾ ಬೇನೆಯ ಆರಿಪೆ ಮಡದಿ
ಹಿಂದಿನ ನೆನಹನು ಕಂಬನಿ ತೊಳೆಗೆ
ಬಂದೇಕಾಂತದಿ ಸೇರೆನ್ನೆದೆಗೆ

ಕಳುವುದು ನಾಚುಗೆ ಮಾತಿನ ಸವಿಯ;
ಸೆಳೆವುದು ನಿಟ್ಟುಸಿರೊಲವಿನ ಸಿರಿಯ;
ಆವುದ ನಚ್ಚುವೆ ಪ್ರೇಮೋತ್ಸವದಿ ?
ಆವುದು ವಂಚಿಸದಿರ್ಪುದು ಮಡದಿ ?

ನಂಬಿಸಿ ಸಂಬಿಸಿ ಹರಿವುದು ಗಳಿಗೆ;
ಚುಂಬಿಸಿ ಚುಂಬಿಸಿ ಸಫಲವದೆನಿಕೆ !
ನಾಳೆಯು ಮಾತದು ಸಾವೆಂದೆನಲು
ತೋಳಿನ ಸೆರೆಯೊಳೆ ಇಂದಿನ ಬಾಳು.

ತೋಳಿನ ಮರೆ ಸಾವನು ಮರಸುವುದು
ಬಾಳುವ ತತ್ವವನದೆ ತಿಳಿಯಿಪುದು
ಜರೆ ಜವ್ವನವನು ಹೀರುವ ಮೊದಲೆ
ತೊರೆ ಲಜ್ಜೆಯ—ಸೇರೆನ್ನೆದೆಯೊಳಗೆ

## ಮುರಲೀನಾದ

ಬಾರಿನ್ನೊಮ್ಮೆ ಅದೊಂದೇ ಮುತ್ತ
ಹೀರುವೆ, ಸಾರಿಸು ಖೇದವನತ್ತ;
ಕದಪಿದು ನುಣ್ದುಟಿಯೊರಗುವ ಬೀಡು
ಎದೆಯೆನ್ನನು ಸೆರೆವಿಡಿದಿಹ ಗೂಡು.

ಏನೆಲೆ ಮೋಹನೆ! ನಿನ್ನನು ಕಂಡು
ಗಾನಕೆ ಸೋಲ್ವನೆ ಹೆಸರಿನ ಗಂಡು?
ಹರಯದ ಮುಗುಳಿಗೆ ಹಾವಸೆ ಕವಿದು
ಒರಗುತಲಿರ್ದುದು ಕೊರಗಿರ್ದಂದು.

ಜೀವನವೆಂದರೆ ಆವುದೊ ವನಿತೆ?
ಸಾವಿಗೆ ಬೆದರುತೆ ಬಾಳುವುದನಿತೆ?
ಒಲವು, ಗೆಲವು, ನಗೆ, ಬಗೆಗಳ ಬುಗ್ಗೆ
ಗುಳುಗುಳಿಸಲಿ, ಅದೆ ಜೀವನದೊಸಗೆ.

ಹೇಳುವರೇನನೊ ತತ್ವವಿದೆಂದು;
ಬಾಳ್ವರದಕೆ ಮೈನಡುಗುತ ನೊಂದು;
ಕೂಟವೆ ನಮ್ಮಯ ತತ್ವದ ಮುಕ್ತಿ;
ಬೇಟವೆ ನಮ್ಮಯ ಭಕ್ತಿ ವಿರಕ್ತಿ.

ಒಪ್ಪೆಲೆ! ಮೋಹನನನು ನೀನೊಪ್ಪು;
ತಪ್ಪದು ಪ್ರೇಮವೆನುತೆ ತೆಗೆದಪ್ಪು.
ತಪ್ಪಾವುದೊ ಒಪ್ಪಾವುದೊ ನಮಗೆ?
ಅಪ್ಪೊಂದೇ ಬದುಕಾಗಿಹ ಜನಕೆ?

## ನಲ್ಮೆ

ಜನಗಳ ಸುಳಿವಿಲ್ಲೀ ಕಾಡಿನಲಿ,
ನೆನಹೆಮ್ಮನು ಕೇಳುವ ವೇಳೆಯಲಿ,
ಮಿನುಗುತಿರುವ ತಾರೆಗಳಭ್ರದಲಿ,
ಕುಣಿಯಲಿ 'ನಾವೇ ಅವರೆ'ನ್ನುತಲಿ !

ಹಾಡಲಿ ಕೋಗಿಲೆ ! ಅರಳಲಿ ಮೊಗ್ಗೆ !
ಮೂಡಲಿ ಚಿಗುರುಕ್ಕಲಿ ಕಿರಿಬುಗ್ಗೆ !
ಒರೆಯಲಿ ! "ಎಮ್ಮೆದೆಹಾಸಿನೊಳವರು
ಒರಗಿಹರೈ ಜೋಡಿನ ಜೀವಿಗಳು."

* * *

ಪೀಡಿಪನಾತನು, ಬಾಡುವಳವಳು,
ಕಾಡುವನಾತನು, ನಾಚುವಳವಳು,
ಮೌನವವನರಿಯದೆ ಗಳಹುವನವನು;
ಮೌನದೆ ಹೃದಯವ ಕರಗಿಪಳವಳು.

ವೀರನ ತೆರದಲಿ ಕಪ್ಪವ ಕೇಳಿ
ಹೋರುವನಾತನು ಹೆಮ್ಮೆಯ ತಾಳಿ;
ಒಪ್ಪಿಗೆಯಿಂದಲಿ ಕಪ್ಪವ ಕೊಟ್ಟು
ಅಪ್ಪಿಗೆ ಸೋಲ್ವಳವಳು ಮೈಬಿಟ್ಟು.

ಸೆಳವಿನ ಹೊನಲಾತನ ಸಂಭ್ರಮವು;
ಬಳುಕುವ ಲತೆಯಾ ವಿರಹಿಣಿಯೊಲವು;
ಮುಳಿದಿಕ್ಕುವುದಾ ವಿರಹಿಯ ಒಲ್ಮೆ;
ಮುಳುಗೇಳುವುದಾ ವನಿತೆಯ ಬಲ್ಮೆ;

ಮುರಲೀನಾದ

ಏನೇನೋ ಹಳಿಸೆನಹನದಲ್ಲಾ
ಜಾನಿಸಿ ಕಳೆದರು ಜಾವವನೆಲ್ಲಾ;
ಮೂಡಲು ಬಿಳಿಪೇರಲು ಬೆಚ್ಚಿದರು
ಓಡಿದರಡವಿಯೆಡೆಯ ಸೇರಿದರು.



ವಿಜಯ ಮುದ್ರಣಾಲಯ, ಮಂಗಳೂರು.